# ಶ್ರೀಧರ ಪುಷ್ಪ

ಮನ್ಯುಸೂಕ್ತಕ್ಕೆ ಪದಪಾಠ, ಅನುವಾದ, ಮನ್ಯುಸೂಕ್ತ ಪುನಶ್ಚರಣಾ ಕ್ರಮ
ಹಾಗೂ ಯಜುರ್ವೇದೀಯ ಪ್ರಾತಃ/ಸಾಯಂ ಸಂಧ್ಯಾವಂದನ, ಅಗ್ನಿಕಾರ್ಯ
ಔಪಾಸನ, ವೈಶ್ವದೇವ, ಬಲಿಹರಣ, ಮತ್ತು ಬ್ರಹ್ಮಯಜ್ಞ



ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಮ್ ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಮ್ ॥

ಪ್ರಕಾಶಕರು :
ಶ್ರೀ ಪವಮಾನ ಸೇವಾ ಸಮಿತಿ (ರಿ.)
ದೇವರಚಿಕ್ಕನಹಳ್ಳಿ, ಬಿಳೇಕಹಳ್ಳಿ ಅಂಚೆ,
ಬೆಂಗಳೂರು-76. ದೂರವಾಣಿ : 26489092

॥ श्री मध्वेश हयवदन पाहि ॥



# ಶ್ರೀಧರ ಪುಷ್ಪ

परमपूज्य पण्डितराज श्रीजालिहाळ श्रीनिवासाचार्याणा प्रियान्तेवासिना
म. शा. सं. श्री द्वारकानाथाचार्येण विरचितः

# मन्युसूक्तार्थमञ्जरी

श्री पवमान सेवा समिति (रि.)
श्रीराघवेंद्रस्वामि मठः
देवरचिक्कनहळ्ळि बेंगलूरु - ५६० ०७८

**SHRIDHARA PUSHPA**
**Manyusooktarthamanjari** -- A profound commentary or famous MANYU SOOKTAS of Rigveda 10th Mandala, Writter by Vidwan **Sri Dwarakanathacharya** along with Moolamantra Padapaatha and Kannada translation by **respected author**

***Published by*** **:** **PAVAMANA SEVA SAMITI (R.)**
**Sri Raghavendraswamy Math**
Devarachikkanahalli
Bengaluru - 560 078
Phone : 26489092, 9449039092

***First Edition*** **:** **2014**



***Copies :*** **1000**

***Price :*** **Rs. 75/-**

***Printed at :*** **SRI RAYEESHA ENTERPRISE**
#13/829, "Rayeesha" 6th Main, 5th 'A' Cross
Kothnur Dinne, J. P. Nagar 8th Phase,
Bangalore - 5600 76 . Cell : 9845194286
E-mail : rayeeshaenterprise@gmail.com
sashriprints8@gmail.com

# ಪ್ರಕಾಶಕರ ನುಡಿ

ನೃಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಞಾನಸುಖಶಕ್ತಿಪಯೋನಿಧಿಃ ॥

ಶ್ರೀ ಪವಮಾನ ಸೇವಾ ಸಮಿತಿಯ ಆಶ್ರಯದಲ್ಲಿ ಶ್ರೀ ಲಕ್ಷ್ಮೀನರಸಿಂಹ, ಶ್ರೀ ಮುಖ್ಯಪ್ರಾಣದೇವರು ಹಾಗು ಶ್ರೀ ರಾಘವೇಂದ್ರ ಸ್ವಾಮಿಗಳ ಮೃತ್ತಿಕಾ ಬೃಂದಾವನದ ಪ್ರತಿಷ್ಠಾಪನೆಯು 1996ರಲ್ಲಿ ನೆರವೇರಿತು. ಅಂದಿನಿಂದಲೂ ನಿರಂತರವಾಗಿ ಶ್ರೀ ಮಠದಲ್ಲಿ ಪಾಠ- ಪ್ರವಚನಾದಿಗಳು, ಬೃಹತೀ ಸಹಸ್ರ, ಪವಮಾನ ಮೊದಲಾದ ಹೋಮ-ಹವನಾದಿಗಳು, ವಾಕ್ಯಾರ್ಥಸಭಾ, ಗ್ರಂಥ ಪ್ರಕಾಶನ, ವಿದ್ವತ್ ಸನ್ಮಾನ, ಆರಾಧನಾ ಮಹೋತ್ಸವ, ಬ್ರಾಹ್ಮಣ ಸುವಾಸಿನೀ ಸಮಾರಾಧನಾ ಮೊದಲಾದ ಶ್ರೀಹರಿಗುರುಸೇವಾರೂಪ ಕಾರ್ಯಗಳು ನಡೆಯುತ್ತಾ ಬಂದು ನಗರದ ಈ ಭಾಗದ ಭಗವದ್ಭಕ್ತರಿಗೆ ಶ್ರೀ ಮಠವು ಶ್ರದ್ಧಾಭಕ್ತಿಗಳ ಕೇಂದ್ರವಾಗಿದೆ.

ಶ್ರೀ ಮಠದ 17ನೇ ವಾರ್ಷಿಕೋತ್ಸವದ ಶುಭ ಸಂದರ್ಭದಲ್ಲಿ ಸಾಧಕರಿಗೆ ಅನುಕೂಲವಾಗಲೆಂದು ಮನ್ಯುಸೂಕ್ತಕ್ಕೆ ಪದಪಾಠ, ಅನುವಾದ, ಮನ್ಯುಸೂಕ್ತ ಪುನಶ್ಚರಣಾ ಕ್ರಮ, ಹಾಗೂ ಯಜುರ್ವೇದೀಯ ಪ್ರಾತಃ/ಸಾಯಂ ಸಂಧ್ಯಾವಂದನ, ಅಗ್ನಿಕಾರ್ಯ, ಔಪಾಸನ, ವೈಶ್ವದೇವ, ಬಲಿಹರಣ, ಬ್ರಹ್ಮಯಜ್ಞವನ್ನು ಪ್ರಕಾಶನ ಮಾಡುತ್ತಿದ್ದೇವೆ.

ನಮ್ಮ ಪ್ರಾರ್ಥನೆಯಂತೆ ವಿದ್ವಾಂಸರಾದ ವಿ॥ ಶಾ॥ ಸಂ॥ ಶ್ರೀ ದ್ವಾರಕಾನಾಥಾಚಾರ್ಯರು ಮನ್ಯುಸೂಕ್ತಕ್ಕೆ ಪದಪಾಠ, ಕನ್ನಡಾನುವಾದ ಹಾಗೂ ಮನ್ಯುಸೂಕ್ತ ಪುನಶ್ಚರಣಾ ಕ್ರಮವನ್ನು ತಿಳಿಸಿರುವುದಲ್ಲದೆ ನಮ್ಮ ಎಲ್ಲಾ ಸತ್ಕರ್ಮಗಳಿಗೂ ಮಾರ್ಗದರ್ಶನವೀಯುತ್ತಿರುವ ಆಚಾರ್ಯರಿಗೆ ನಮ್ಮ ಸಮಿತಿಯ ಪರವಾಗಿ ಭಕ್ತಿ ಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತಿದ್ದೇವೆ.

ಶ್ರೀಧರ ಪುಷ್ಪ ಪ್ರಕಾಶನಕ್ಕೆ ಆರ್ಥಿಕವಾಗಿ ಸಹಕಾರವನ್ನು ನೀಡುವುದರ ಮೂಲಕ ಶ್ರೀ ಹರಿ-ವಾಯು-ಗುರುಗಳ ಸೇವೆಯನ್ನು ಮಾಡಿರುವ ಅಂತರಂಗ ಭಕ್ತರಿಗೂ ಮತ್ತು ಅವರ ಕುಟುಂಬದವರಿಗೂ ಜ್ಞಾನ, ಭಕ್ತಿ, ವೈರಾಗ್ಯವನ್ನು ಕರುಣಿಸಲೆಂದು ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಭಾರತೀರಮಣ ಮುಖ್ಯಾಪ್ರಾಣಾಂತರ್ಗತ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯಲ್ಲಿ ಪ್ರಾರ್ಥಿಸುತ್ತೇವೆ.

ಈ ಗ್ರಂಥವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿ ಕೊಟ್ಟ ರಯೀಶ ಎಂಟರ್‌ಪ್ರೈಸ್‌ನ ಮಾಲೀಕರಾದ ಕೂಡ್ಲಿ ನಾ. ಶ್ರೀ. ವಾಸುದೇವರಾವ್ ಇವರಿಗೂ ನಮ್ಮ ವಂದನೆಗಳನ್ನು ಅರ್ಪಿಸುತ್ತಿದ್ದೇವೆ.

ಈ ಗ್ರಂಥದ ಅಕ್ಷರ ಜೋಡಣೆಯನ್ನು ಅತ್ಯಂತ ಆಸಕ್ತಿಯಿಂದ ಮಾಡಿಕೊಟ್ಟ ಶ್ರೀ ಅರವಿಂದ ಹಾರ್ನಹಳ್ಳಿಯವರಿಗೂ ನಮ್ಮ ವಂದನೆಗಳನ್ನು ಅರ್ಪಿಸುತ್ತಿದ್ದೇವೆ.

ಈ ಗ್ರಂಥರೂಪ ಶ್ರೀಧರ ಪುಷ್ಪವನ್ನು ಶ್ರೀ ರಾಘವೇಂದ್ರತೀರ್ಥ ಗುರ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀ ಲಕ್ಷ್ಮೀ ನರಸಿಂಹ ದೇವರ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇವೆ.

ಶ್ರೀ ಪವಮಾನ ಸೇವಾ ಸಮಿತಿ
ಬೆಂಗಳೂರು



|| श्री हनुमभीममध्वेश हयवदन पाहि ||

|| श्री गुरुराजो विजयते ||

परमपूज्य पण्डितराज

श्रीमज्जालिहाळ श्रीनिवासाचार्याणां प्रियान्तेवासिना

**म। शा। सं। श्री द्वारकानाथाचार्य विरचिता**

# || मन्युसूक्तार्थमञ्जरी ||

# || ಮನ್ಯುಸೂಕ್ತಾರ್ಥಮಂಜರೀ ||

ಈ ಮನ್ಯುಸೂಕ್ತವು ದಶವು ಮಂಡಲದಲ್ಲಿ ಪ್ರಸಕ್ತವಾಗಿದೆ. ಈ ಮಂಡಲದ ವಿನಿಯೋಗವನ್ನು *यस्ते मन्यो त्वया मन्यो इति सूक्ताद्वयस्य तु । तापसस्य सुतो मन्यु ऋषिराद्योऽवमः स्मृतः ।। मन्युनामानृसिंहो वै देवताऽत्र प्रकीर्तिता ।। ऋगाद्या जगती प्रोक्ता द्वितीयाद्या ऋचौ नव ।। त्रिष्टुभोऽन्त्याश्चतस्रश्च जगत्योऽत्र ऋचो मताः ।।* ಎಂದು ವಿನಿಯೋಗ ಗ್ರಂಥಗಳಲ್ಲಿ ಉಲೇಖಿತವಾಗಿದೆ. ಈ ಸೂಕ್ತದಲ್ಲಿ ಹದಿನಾಲ್ಕು ಮಂತ್ರಗಳಿದ್ದಾವೆ. ಈ ಮಂತ್ರಗಳಿಗೆ ಮನ್ಯುವೇ ಋಷಿಗಳು. ಮನ್ಯುನಾಮಕ, ಮನ್ಯು ಅಂತರ್ಗತ ನರಸಿಂಹನೇ ದೇವತಾ. ಇಲ್ಲಿ ಮೊದಲನೇಯ ಮಂತ್ರ, ಕಡೆಯ ನಾಲ್ಕುಮಂತ್ರಗಳು ಜಗತೀ ಛಂದಸ್ಸಿನಲ್ಲಿದೆ. ಉಳಿದ ಮಂತ್ರಗಳು ತ್ರಿಷ್ಟುಪ್ ಛಂದಸ್ಸಿನಲ್ಲಿದೆ. ಈ ಮಂತ್ರದ ಜಪ ಹೋಮಾದಿಗಳಿಂದ ಅನಿಷ್ಟ ನಿವೃತ್ತಿಯು, ಹಾಗೂ ವಿದ್ಯಾ ಪ್ರಾಪ್ತಿಯು ಆಗುತ್ತದೆ. ಈ ಮಂತ್ರಗಳು ಪರಮಮುಖ್ಯ ವೃತ್ತಿಯಿಂದ ಶ್ರೀನರಸಿಂಹದೇವರನ್ನೂ ಹಾಗೂ ಮುಖ್ಯವೃತ್ತಿಯಿಂದ ಶ್ರೀಮುಖ್ಯಪ್ರಾಣನನ್ನು ಪ್ರತಿಪಾದಿಸುತ್ತದೆ. ಈ ಸೂಕ್ತಗಳಿಗೆ, ಧೀರೇಂದ್ರತೀರ್ಥರೇ ಮೊದಲಾದ ಜ್ಞಾನಿಗಳು ವ್ಯಾಖ್ಯಾನಿಸಿದ್ದಾರೆ. ಈ ಸೂಕ್ತವನ್ನು ಪಠಿಸುತ್ತಾ ಶ್ರೀಭೀಮಸೇನದೇವರು, ದುಃಶಾಸನನನ್ನು ಸಂಹರಿಸಿ ಶ್ರೀಹರಿಗೆ ಅರ್ಪಿಸಿದರು.

**मन्त्र १**

संहिता – **यस्ते मन्योऽविधद्वज्रसायक**
**सह ओजः पुष्यति विश्वमानुषक् ।**

साह्याम दासमार्यं त्वया युजा
सहस्कृतेन सहसा सहस्वता || १ ||

पद पाठः – यः । ते । मन्यो इति । अविधत् । वज्र । सायक ।
सहः । ओजः । पुष्यति। विश्वम् । आनुषक् ।
साह्याम । दासम् । आर्यम् । त्वया । युजा ।
सहःऽकृतेन । सहसा । सहस्वता || १ ||

ಸಂಹಿತಾ – ಯಸ್ತೇ ಮನ್ಯೋಽವಿಧದ್ವಜ್ರ ಸಾಯಕ
ಸಹ ಓಜಃ ಪುಷ್ಯತಿ ವಿಶ್ವಮಾನುಷಕ್ ।
ಸಾಹ್ಯಾಮ ದಾಸಮಾರ್ಯಂ ತ್ವಯಾ ಯುಜಾ
ಸಹಸ್ಕೃತೇನ ಸಹಸಾ ಸಹಸ್ವತಾ ॥೧॥

'**हे अविधद्वज्रसायक** ವಜ್ರಸದೃಶವಾದ ನಂದನವೆಂಬ ಶಂಖ ಅಥವಾ ಬಾಣವನ್ನು ಧರಿಸಿರುವ, **हे मन्यो** ಕ್ರೋಧಕ್ಕೆ ಅಭಿಮಾನಿಯಾದ ರುದ್ರಾಂತರ್ಗತನಾದ, ಯಜ್ಞಾಭಿಮಾನಿ ಇಂದ್ರಾಂತರ್ಗತನಾದ, ಜ್ಞಾನರೂಪನಾದ ಮನ್ಯುನಾಮಕನಾದ ನರಸಿಂಹನೇ, ***मन्यु दैत्ये कृतौ कृधि*** ಎಂದು ಕೋಶದಲ್ಲಿದೆ. ನಿರುಕ್ತಕಾರರೂ ಸಹ, ***मनुतेः दीप्तिकर्मणः क्रोधकर्मणः सम्बन्धकर्मणः वा*** ಎಂದು ಹೇಳಿದ್ದಾರೆ, ***मन्युः कृपा*** ಎಂದು ಹೈಮಾದ್ರಿ ವೃತ್ತಿಯಲ್ಲಿ ನಿರೂಪಿತವಾದ್ದರಿಂದ, ಕೃಪಾಶ್ರಯನೇ ಪೂಜಾರ್ಹನಾದವನೇ ಆಗ್ರಹಸಹಿತವಾಗಿ ಮನನಪೂರ್ವಕವಾಗಿ ಕಾರ್ಯಗಳನ್ನು ಸಂಪಾದಿಸುವವನೇ, ನರಸಿಂಹನೇ,

**ते** ನಿನ್ನ, **यः** ಯಾವ, **सहः** ಬಲವು, **ओजः** ತೇಜಸ್ಸು, ಪ್ರಭಾವವು, ***ओजः प्राभावे दीप्तौ च*** ಎಂದು ಕೋಶವು, **विश्वम्** ಸಮಸ್ತ ಜಗತ್ತನ್ನು, **आनुषक्** ವ್ಯಾಪಿಸತಕ್ಕದ್ದಾಗಿ, **पुष्यति** ಪೋಷಿಸುತ್ತದೆ, **सहस्वता** ***सहो बलं सहो मार्गं*** ಎಂದು ಕೋಶವಚನದಂತೆ ಬಲವುಳ್ಳ, ಸಹನೆಯುಳ್ಳ, **त्वया** ನಿನ್ನಿಂದ, **युजा** ಕೂಡಿಕೊಂಡು, **सहसा** ಬಲದಿಂದ ಸೈನ್ಯದಿಂದ, **दासम्** ನೀಚನನ್ನು **आर्यम्** ದೊಡ್ಡವನಾದ ಶತ್ರುವನ್ನು ನಾವುಗಳು **साह्यामः** ನಿರಾಕರಿಸುತ್ತೇವೆ.

[1]हे **मन्यो** ವೇದಾರ್ಥಜ್ಞಾನ ಸ್ವರೂಪನಾದ, ಶುದ್ಧವಿದ್ಯಾವೈಭವನಾದ ಪೂಜ್ಯನಾದ ಮುಖ್ಯಪ್ರಾಣನೇ, **वज्रसायक** ಪ್ರಾಣಗಳನ್ನು ಭೇದಿಸಿ, ಅವರನ್ನು ಸಂಹರಿಸುವ ಶರ ಸ್ವರೂಪನಾದವನೇ ***पञ्चात्मको मारुत: प्राण:*** ಎಂದು ವಚನವಿದೆ. ಶ್ರುತಿಜನ್ಯವಾದ ಜ್ಞಾನವೇ ಆಯುಧವಾಗಿ ಉಳ್ಳವನೇ, **य:** ಯಾವ, **ते** ನಿನ್ನ, **सह:** ಮಾನಸಿಕ ಶಾರೀರಿಕ ಬಲವು, **ओज:** ಅಖಂಡಸಾಮರ್ಥ್ಯವು, ಇನ್ನೊಬ್ಬರನ್ನು ನವೀಕರಿಸುವ ಪ್ರಭಾವವು, **विश्वम्** ಹದಿನಾಲ್ಕು ಲೋಕಗಳನ್ನು, **आनुषक्** ಎಲ್ಲಾ ಕಡೆಯಲ್ಲಿಯೂ ಅನುಕೂಲವಾಗುವ ರೀತಿಯಲ್ಲಿ ವ್ಯಾಪಿಸಿ, **अविधात्** ಧರಿಸುತೀಯಾ.

ಹಾಗೂ **पुष्यति** ಭಗವಂತನ ಸಂತೋಷಕ್ಕಾಗಿ ಪಾಲಿಸುತ್ತೀಯೇ, **सहस्वता** ಬಲಸಹನೆಯುಳ್ಳ, ತನಗೆ ಹಾಗೂ ಪರರಿಗೆ ಸಹನೆಬಲಗಳನ್ನು ಕೊಡುವ, ಗಂಭೀರ ಸರಳ ಸ್ವಭಾವ ಬಲಜ್ಞಾನವುಳ್ಳ, **सहस्कृतेन** ಬಲಾದಿಪ್ರದಾಯಕನಾದ, ***कृतं निवारण निषेधयो:*** ಎಂಬ ವಚನದಂತೆ, ಪರರಿಂದ ನಿವಾರಣೆರಹಿತನಾದ, **त्वया** ನಿನ್ನಿಂದ, **युजा** ಕೂಡಿದ, **सहसा** ವಾಯುದೇವರಿಂದ, ***सहसा वायुना*** ಎಂದು ಋಗ್ಭಾಷ್ಯದ ವಚನ, **दासम्** ಅತ್ಯಂತ ನೀಚನಾದ, **आर्यम्** ಬಲಿಷ್ಠನಾದ (ಯುಕ್ತಿಗಳಿಂದ) ಪ್ರತಿವಾದಿಯನ್ನು, **साह्याम:** ನಿರಾಕರಿಸುವ ಅಥವಾ, **दासम्** *दासि दंसते दर्शने च* ಎಂಬ ವಚನದಂತೆ ಭಗವಂತ ಪರಿಚರ್ಯೆಯಿಂದ ಮಾತ್ರ ಜೀವಿಸುವ ಭಗವದ್ಭಕ್ತನಾದ, **आर्यम्** ಪರಮ ಧಾರ್ಮಿಕನಾದ, **साह्याम:** ಪರಾಮರ್ಶಿಸೋಣ. ***प्राणो वा व महान् सह ओज बलमित्याचक्षते*** ಎಂದು ಪೈಂಗಿ ಶ್ರುತಿಯಲ್ಲಿ ನಿರೂಪಿಸಲಾಗಿದೆ.

## मन्त्र २

संहिता – **मन्युरिन्द्रो मन्युरेवास देवो**
**मन्युर्होता वरुणो जातवेदा: ।**
**मन्युं विश ईळते मानुषीर्या:**
**पाहि नो मन्यो तपसा सजोषा: ।। २ ।।**

पदपाठः – मन्युः । इन्द्रः । मन्युः । एव । आस । देवः ।
मन्युः । होता । वरुणः । जातऽवेदाः । मन्युं ।
विशः । ईळते । मानुषीः । याः । पाहि । नः ।
मन्यो इति । तपसा । सऽजोषाः ॥ २ ॥

ಸಂಹಿತಾ - ಮನ್ಯುರಿಂದ್ರೋ ಮನ್ಯುರೇವಾಸ ದೇವೋ
ಮನ್ಯುರ್ ಹೋತಾ ವರುಣೋ ಜಾತವೇದಾಃ ।
ಮನ್ಯುಂ ವಿಶ ಈಳತೇ ಮಾನುಷೀರ್ಯಾಃ
ಪಾಹಿ ನೋ ಮನ್ಯೋ ತಪಸಾ ಸಜೋಷಾಃ ॥೨॥

[1]**मन्युः एव देवः** ಮನ್ಯುನಾಮಕನಾದ ನರಸಿಂಹನೇ ಕ್ರೀಡಾದಿಗುಣಸಂಪನ್ನನಾಗಿ ದೇವ ಶಬ್ದವಾಚ್ಯನು. *द्योतनात् विजयात् कान्त्या स्तुत्या व्यवहृतेरपि। गत्या रत्या च देवः* ಎಂದು ಋಗ್ಭಾಷ್ಯದಲ್ಲಿ ವಚನವಿದೆ. **होता** ಆರು ಇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸುವವನು. *होतृसंस्थं विशेषतः । इन्द्रियाग्निषु चार्थानां यद्धोता होतृनामकः* ಎಂದು ವಚನ. **आस** ಆಗಿದ್ದಾನೆ **वरुणः** *आवृणोतीति वरुणः तपसा ज्ञानतोऽपि वा । वरमुन्नयतीत्यस्मात् वरानन्दत्वतोऽपि वा* ಎಂಬ ವಚನದಂತೆ ಜ್ಞಾನಿಗಳನ್ನು, ಅಜ್ಞಾನಿಗಳನ್ನೂ ಆವರಿಸಿದವನು, ವರಗಳನ್ನು ಕೊಡುವವನು, ಶ್ರೇಷ್ಠವಾದ ಆನಂದವುಳ್ಳವನು.

ಅವನೇ **जातवेदः** ಹುಟ್ಟಿರುವ ಎಲ್ಲಾ ವಸ್ತುಗಳನ್ನು ತಿಳಿದವನು.**आस्य** ಆಗಿದ್ದಾನೆ. **तपसा** ಕೃಚ್ಛ್ರ ಚಾಂದ್ರಾಯಣಾದಿ ಕಠಿಣ ವ್ರತಗಳಿಂದ, ಧ್ಯಾನಾದಿಗಳಿಂದ, **सजोषाः** *तूष्णीमर्थे सुखं जोषम्* ಎಂದು ಕೋಶವಿದೆ, ಸುಖಸಹಿತನಾದ ತೂಷ್ಣೀಂಭೂತನಾದ, **याः** ಯಾವ, **मानुषीः** ಮನುಷ್ಯಸಂಬಂಧಿಗಳಾದ, **विशः** ಪ್ರಜೆಗಳು, **त्वा** ನಿನ್ನನ್ನು **ईळते** ಸ್ತುತಿಸುತ್ತಾರೆ. **ताः** ಅಂತಹ ಪ್ರಜೆಗಳನ್ನೂ, **नः** ನಮ್ಮಗಳನ್ನೂ, **पाहि** ರಕ್ಷಿಸು .

[1]**मन्युः** ರಮಾಪ್ರಸಿದ್ಧವರ್ಜ್ಯವಾದ, ನಾರಾಯಣಪ್ರಸಿದ್ಧ-ವರ್ಜ್ಯವಾದ ಅನಂತವೇದಗಳಿಂದ ಪ್ರತಿಪಾದ್ಯನಾದ, *मन्युः ज्ञानी* ಎಂಬ

ಕರ್ಮನಿರ್ಣಯ ವಾಕ್ಯದಂತೆ ಜ್ಞಾನಿಯಾದ, **इंद्रः ऐश्वर्यात् इंद्रनामा तु, यस्माद् वायुपदे योग्या बहवस्त्विन्द्रनामका:** ಎಂಬ ವಚನಗಳಿಂದ ಐಶ್ವರ್ಯವುಳ್ಳ, ಅನಂತತೇಜಸ್ವಿಯಾದ, ಸ್ಥಾವರ ಜಂಗಮಾತ್ಮಕ ಸರ್ವ ಪದಾರ್ಥಗಳನ್ನು ಪ್ರಕಾಶಿಸುವ, **इन्द्रस्वं प्राणमोजसा** ಎಂದು ಷಟ್‌ಪ್ರಶ್ನವಚನವು, **चतुर्दशेषु चेन्द्रेषु यो द्वितीयस्तु रोचनः । वायुरिति विख्यातः** ಎಂದು ಗರುಡಪುರಾಣದ ವಚನದಂತೆ ಇಂದ್ರ ಶಬ್ದವಾಚ್ಯನು, **यो वै वयुः स इंद्रः, य इन्द्रः स वायुः, स योऽयं मध्ये प्राणः एष एवेन्द्रः** ಎಂದು ಶತಪಥ ಬ್ರಾಹ್ಮಣ. **इन्द्रः परमैश्वर्यसम्पन्नो भीमः** ಎಂಬ ವಚನದಂತೆ ಐಶ್ವರ್ಯಸಂಪನ್ನನಾದ, ಆ ವಾಯುವೇ ಇಂದ್ರ ಶಬ್ದವಾಚ್ಯನು.

**देव एव** [1]ಕ್ರೀಡಾದಿಗುಣಸಂಪನ್ನನಾಗಿದ್ದಾನೆ, [2]ಪ್ರಕಾಶಮಾನ ಸ್ವರೂಪನಾಗಿದ್ದಾನೆ. [3]ಭಕ್ತರುಗಳಿಗೆ ಅಭೀಷ್ಟಗಳನ್ನು ಕೊಡುವವನಾಗಿದ್ದಾನೆ. [4]ಸಕಲ ಜೀವರುಗಳ ಕ್ರೀಡೆಗೆ ಕಾರಣನಾಗಿದ್ದಾನೆ. [5]ಎಲ್ಲ ಪದಾರ್ಥಗಳ ಜ್ಞಾನವುಳ್ಳವನಾಗಿದ್ದಾನೆ. [6]ಬ್ರಹ್ಮರೂಪದಿಂದ ವೈಕುಂಠದಲ್ಲಿ ಮುಕ್ತಜೀವರುಗಳನ್ನು, ವಾಯುರೂಪದಿಂದ ಸಂಸಾರದ ಜೀವರನ್ನು ಪ್ರಚೋದಿಸುತ್ತಾನೆ, ಪ್ರಕಾಶಿಸುತ್ತಾನೆ. [7]ಶ್ರೀಹರಿಯನ್ನು ಭಕ್ತಿಯಿಂದ ಸುತ್ತಿಸುತ್ತಾನೆ. [8]ಪ್ರಳಯದಲ್ಲಿ ಜೀವರುಗಳನ್ನು ಭಗವಂತನ ಉದರದಲ್ಲಿ ಮಲಗಿಸುತ್ತಾನೆ, [9]ಸ್ವರ್ಗಲೋಕಕ್ಕೆ ಸ್ವಾಮಿಯಾಗಿದ್ದಾನೆ. **वायवे त्वां प्रादाद्दिवम्** ಎಂಬ ವಚನವಿದೆ.

[10]**द्यौः नाम देवी विद्युत् स्यात् साक्षादेव सरस्वती** ಎಂಬ ವಚನದಂತೆ ಸರಸ್ವತಿ, ಭಾರತೀದೇವಿಯರಿಗೆ ಪತಿಯಾದ, [11]**द्योतनात् सर्ववस्तूनां** ಎಲ್ಲ ವಸ್ತುಗಳನ್ನು ಪ್ರಕಾಶಿಸುವ, **ज्ञानरूपां प्रियां चेति** ಎಂಬ ವಾಕ್ಯದಂತೆ ಜ್ಞಾನಿಪ್ರಿಯನಾದ, [12]**प्राणो ह्यहनि** ಎಂಬ ವಾಕ್ಯದಂತೆ ಅಹರಭಿಮಾನಿಯಾದ, [13]**कस्मै देवाय हविषा विधेम** ಎಂಬ ಶೃತಿಯಂತೆ ಹಿರಣ್ಯಗರ್ಭನ ಪದವಿಗೆ ಬರುವ, [14]**देवो द्युनाथो भवति** ಎಂಬ ಯಾಸ್ಕರ ವಚನದಂತೆ ಸತ್ಯಲೋಕೇಶ್ವರನಾದ, [15]**देवौ विष्णुश्च वायुश्च सर्वज्ञत्वात्क्रमेण च** ಎಂಬಂತೆ ಸರ್ವಜ್ಞನಾದ, [16]**देवेश्रेष्टस्तु मारुतः, देवानां देवता वायुः वायोः देवो जनार्दनः** ಎಂಬಂತೆ ದೇವತಾಶ್ರೇಷ್ಠನಾದ, [17]ರುದ್ರಾದಿಗಳಿಂದ ಸ್ತುತಿಪನಾದ, ಸರ್ವ ದೇವತೆಗಳಿಂದಲೂ ಉಪಾಸಿತನಾದ,

**होता** [1]*पापया मायया मिथ्या स्तुवन्तं त्वामपि प्रभो । मायामयाः स्तवगुणाः न सन्ति परमार्थतः । इति नित्यं स्तुवन्तं च मायावादस्य गदर्थम् । सञ्चूर्णय तमस्येव क्षिप्त्वा तमास्मभिः सदा । दूरं च पातयत्वेतान् वायुस्तस्मिन् तमस्यध* ಎಂಬ ವಚನದಂತೆ ಭಗವಂತನ ನಿಂದಿಸುವ ನಿರ್ಗುಣ ಮಿಥ್ಯಾತ್ವವಾದಿಗಳನ್ನು ಅಂದಂತಮಸ್ಸಿನಲ್ಲಿ ಹಾಕುವ, ಹರಿಭಕ್ತರುಗಳಿಂದ ಅರ್ಪಿತವಾದ ನಿರ್ಮಾಲ್ಯಗಳಿಂದ ಸದಾ ಪ್ರೀತನಾದ, ತಾನೇ ಶ್ರೀಲಕ್ಷ್ಮೀನಾರಾಯಣರ ಪಾದಕಮಲಗಳಲ್ಲಿ ಆದರಪೂರ್ವಕವಾಗಿ ಸಕಲಕಾರ್ಯಗಳನ್ನು ಅರ್ಪಿಸಿ ಸಂತೋಷಪಡುವ, ಸಕಲ ಸಚ್ಛಾಸ್ತ್ರಗಳನ್ನು ಭಕ್ತರಿಗೆ ವ್ಯಾಖ್ಯಾನಿಸಿ ಕೊಡುವ.

[2]*अग्निः वै देवानां होता* ಎಂದು ಐತರೇಯ ಬ್ರಾಹ್ಮಣಾದಲ್ಲಿದೆ. **होमं यः करोति स होता** ಎಂಬ ವಾಕ್ಯದಂತೆ ಹರಿಯ ಆಜ್ಞೆಗಳಿಗನುಸಾರವಾಗಿ ಪ್ರಳಯಕಾಲದಲ್ಲಿ ಜಗತ್ತನ್ನು ರುದ್ರಾಂತರ್ಗತ ಸಂಕರ್ಷಣನಲ್ಲಿ ಹೋಮಿಸುವವನು. **वायोर्भूतानि जायन्ते लयमेष्यन्ति तत्र च** ಎಂಬ ವಚನವೂ ಇದೆ. [3]ಋಗ್ವೇದದ ಅರ್ಥವನ್ನು ತಿಳಿದವನು. **होता ऋग्वेदमर्मवेदी, तस्य वेदित्वं च विष्णोः प्रीत्यर्थमेवानतु ज्ञानार्थम्** ಎಂಬ ವಚನವು ಗೀತಾತಾತ್ಪರ್ಯನ್ಯಾಯದೀಪಿಕೆಯಲ್ಲಿದೆ.

[4]*होत यज्ञत् प्रजापतिः* ಎಂಬ ವಾಕ್ಯಕ್ಕೆ ಅನುಸರಿಸಿ ಅನಾರತವಾಗಿ ವೇದೋಚ್ಚಾರಣೆ ಮಾಡುವವನು. [5]ವಷಟ್ಕಾರನು. **प्राणाः वाक् च प्राणापानौ वषट् कारः** ಎಂದು ವಚನವಿದೆ. [6]ಜ್ಞಾನಿಗಳಿಂದ ಜ್ಞಾನಕ್ಕೋಸ್ಕರವಾಗಿ ಆಹ್ವಾನಿಸಲ್ಪಡುವವನು, **होता आह्वातव्यः** ಎಂದು ಯಾಸ್ಕರ ವಚನ.

**वरुणः** [1]**महान् वै मुख्यप्राणो येन व्याप्तं चराचरम्** ಎಂಬಂತೆ ಎಲ್ಲ ಪದಾರ್ಥಗಳನ್ನು ಆವರಿಸುವವನು [2]ಎಲ್ಲರೂ ಇವನನ್ನೇ ಗುರುಗಳನ್ನಾಗಿ ಸ್ವೀಕರಿಸಲ್ಪಡುವವನು. **वरुणं सन्तं वरुणमित्याचक्षते** ಎಂದು ಗೋಪಥದಲ್ಲಿದೆ. [3]ಸ್ವಯಂ ಭೃತ್ಯನಾಗಿ ಸ್ವಾಮಿಯಾದ ನಾರಾಯಣನನ್ನು ಶರಣಭಾವದಿಂದ ತನ್ನಲ್ಲಿ ನಿತ್ಯದಲ್ಲಿಯೂ ಆರಾಧಿಸುವವನು. **वृणोतिजुहोती समनार्थौ** [4]ವರುಣನಾಮಕನಾದಾದಿತ್ಯನಿಗೆ ನಿಯಾಮಕನಾದವನು.

**जातवेदा:** [1]ಹುಟ್ಟಿರುವ ಎಲ್ಲ ಪದಾರ್ಥಗಳ ಜ್ಞಾನವುಳ್ಳವನೂ, ***प्राणो वै जातवेदा: स हि जातानां वेद*** ಎಂದು ಐತರೇಯ ಬ್ರಾಹ್ಮಣದಲ್ಲಿದೆ. [2]ಎಲ್ಲ ಪ್ರಮೇಯಗಳನ್ನು ನಿಸ್ಸಂಶಯವಾಗಿ ಎಲ್ಲ ಕಾಲದಲ್ಲಿಯೂ ಸುಖವಾಗಿ ತಿಳಿದವನು, [3]ಹುಟ್ಟಿರುವ ಎಲ್ಲಾ ಪದಾರ್ಥಗಳಲ್ಲಿ ವಿದ್ಯಮಾನನಾದ, [4]ಯಾರಿಗೆ ಉಪದೇಶಿಸಲಿಕ್ಕೆ ಎಲ್ಲ ವೇದಗಳು ಅಭಿವ್ಯಕ್ತವಾದವೋ ಅವನು **जातवेदा:** [5]ಜಾತಪ್ರಜ್ಞನು, ಹುಟ್ಟಿದನಿಂದಲೇ ಎಲ್ಲ ಜ್ಞಾನವುಳ್ಳವನು, [6]ವೇದಗಳು ಯಾರ ಮುಖದಿಂದ ಉಪದೇಶಿಸಲ್ಪಟ್ಟವೋ ಅವನು ಜಾತವೇದನು. ಹುಟ್ಟಿರುವ ಸಾತ್ವಿಕರಲ್ಲಿ ತತ್ವಜ್ಞಾನವನ್ನು ಹುಟ್ಟಿಸಿ, ಯಥಾಯೋಗ್ಯವಾಗಿ ಮೋಕ್ಷವನ್ನು ಹೊಂದಿಸುವನು.

**आस** ಆಗಿದ್ದೀಯೇ, **आस** ಹೇ ಸ್ವಾಮಿ, ಸರ್ವಾಂತರ್ಯಾಮಿ, ***तपसा तप आदित्य उच्यते*** ಎಂಬ ಪ್ರಮಾಣಕ್ಕನುಸಾರವಾಗಿ ಸೂರ್ಯನ ತಾಪಕಾತ್ಮವಾದ ತೇಜಸ್ವಿನಂತೆ, ವಿಲಕ್ಷಣ ತೇಜಸ್ಸಿನ ಪ್ರಭಾವದಿಂದ, ಶಾಸ್ತ್ರದೃಷ್ಟವಾದ ಕಾಯಕ್ಲೇಶನಿಮಿತ್ತಕವಾದ ಅನಶನ, ನಿರ್ಜಲಾದಿ ಕಠಿಣಮಹಾವ್ರತಗಳಿಂದ, ಧ್ಯಾನಾದಿಗಳಿಂದ, **सजोष:** ನಮ್ಮ ಸೇವೆಗಳಿಂದ ಪ್ರೀತನಾದ, ನಮ್ಮಗಳಿಂದ ಸಹಿತವಾಗಿ ಪರಸ್ಪರವಾಗಿ ಪ್ರೀತನಾದ, **या: मानुषी:** ಯಾವ ಮಾನವ ಸಂತತಿಯ, **विश:** ಪ್ರಜೆಗಳು, **मन्युम्** ಜ್ಞಾನಾತ್ಮಕನಾದ, **त्वा** ನಿನ್ನನ್ನು ಪ್ರಾಣದೇವರನ್ನು **ईळते** ಸ್ತುತಿಸುತ್ತಾರೆ, **ता: न** ಅಂತಹ ತಪಸ್ವಿಗಳಾದ ಜನರನ್ನು **पाहि** ಯೋಗ್ಯತಾನುಸಾರವಾಗಿ ರಕ್ಷಿಸು.

**मन्त्र ३**

संहिता – **अभीहि मन्यो तवसस्तवीयान्**
**तपसा युजा वि जहि शत्रून् ।**
**अमित्रहा वृत्रहा दस्युहा च**
**विश्वा वसून्या भरा त्वं न: ।। ३ ।।**

पदपाठ – अभी । इहि । मन्यो इति । तवसः । तवीयान् ।
तपसा । युजा । वि । जहि। शत्रून् ।अमित्रऽहा ।

वृत्रऽहा । दस्युऽहा । च । विश्वा । वसूनि । आ ।
भर। त्वम् । नः ।। ३ ।।

ಸಂಹಿತಾ – ಅಭೀಹಿ ಮನ್ಯೋ ತವಸಸ್ತವೀಯಾನ್
ತಪಸಾ ಯುಜಾ ವಿ ಜಹಿ ಶತ್ರೂನ್ ।
ಅಮಿತ್ರಹಾ ವೃತ್ರಹಾ ದಸ್ಯುಹಾ ಚ
ವಿಶ್ವಾ ವಸೂನ್ಯಾ ಭರಾ ತ್ವಂ ನಃ ।।೩।।

[1]ಮೊದಲಿನ ಎರಡು ಋಕ್ಕುಗಳಿಂದ ಶತ್ರುಗಳ ನಿಗ್ರಹವನ್ನು ಪ್ರಾರ್ಥಿಸಿ, ಶತ್ರುನಿಗ್ರಹಪೂರ್ವಕವಾಗಿ ತನಗೆ ಧನಪ್ರಾಪ್ತಿಯನ್ನು ಪ್ರಾರ್ಥಿಸುತ್ತಾರೆ. **हे मन्यो** ಮನ್ಯುನಾಮಕನಾದ ಶ್ರೀಹರಿಯೇ, **त्वं** ನೀನು, **तवसः** ಬಲಿಷ್ಠರುಗಳಿಗಿಂತ, **तवीयान्** ಬಲಿಷ್ಠನಾಗಿದ್ದೀಯೇ ಅಥವಾ **तवसः** ಅತ್ಯಂತ ವೃದ್ಧನಾದವನು **तवीयान्** ಗುಣತಃ ದೇಶತಃ ಕಾಲತಃ ಪೂರ್ಣನು, *तव इति सौत्रो धातुः वृद्धर्थः* ಅಂತಹ ನೀನು **अभि इहि** ನಮಗೆ ಅಭಿಮುಖನಾಗಿ ಬಾ.

**तपसा युजा** ಅನೇಕವ್ರತಾದಿಗಳ ಅನುಷ್ಠಾನದಿಂದ, ತಪಸ್ಸಿನ **सहसा** ಬಲದಿಂದ, **शत्रून्** ಶತ್ರುಗಳನ್ನು **विजहि** ನಾಶಪಡಿಸು. ಅಥವಾ **तपसा** ಆಲೋಚನೆಯಿಂದ **युजा** ಧ್ಯಾನದಿಂದ *युज समाधौ इति धातुपाठात्* **वि जहि** ನಿನಗೆ ಶತ್ರುಗಳನ್ನು ಹರಿಸುವ ಸಾಮರ್ಥ್ಯವಿದೆಯಾ! ಎಂದರೆ, **अमित्रहा** ಅಮಿತ್ರರಾದ ಹಿರಣ್ಯಕಶಿಪು ಮೊದಲಾದವರನ್ನು ನಾಶಿಸಿರುವಿ, **च** ಮತ್ತು **वृत्रहा** ಇಂದ್ರಾಂತರ್ಗತನಾಗಿ ವೃತ್ತಾಸುರನನ್ನು ನಾಶಿಸಿರುವಿ, ಅಥವಾ ಆವರಕವಾದ ಪಾಪಗಳನ್ನು ನಾಶಿಸಿರುವಿ. *वृञ् वरणे इति धातोः।।* **दस्युहा** ಗೂಢದ್ವೇಶಿಗಳನ್ನು ನಾಶಿಸುವಿ.

ಅಂತಹ ನೀನು **नः** ನಮ್ಮಗಳಿಗೆ **विश्वा** *विश्वानि* ಸಮಸ್ತವಾದ **वसूनि** ಧನಗಳನ್ನು **आ भर** ಕೊಡು, ಧನಗಳಿಂದ ಪೂರ್ಣಗೊಳಿಸು. *द्रव्यं वित्तं स्वापतेयं रिक्तमुक्थं धनं वसु* ಎಂದು ಕೋಶವು.

[2]हे **मन्यो** ಅಹಂಕಾರಿಕ ಪ್ರಾಣನಾಥನೇ, *मन्युरहङ्कारः स च नासिक्य वायुः, अहंकारिकप्राणः, तस्योत्पादकत्वात् मुख्यप्राणोरपि तदुपदेशः ।* ಮಹತ್ತತ್ವಾಭಿಮಾನಿಯಾದ ವಾಯುದೇವರೂ ಸಹ

ಅಹಂಕಾರತತ್ವದ ಸೃಷ್ಟಿಗೆ ಕಾರಣರಾದ್ದರಿಂದ ಮನ್ಯು ಎಂದರೆ ವಾಯುದೇವರೇ, ಸರ್ವ ಜಗತ್ತಿಗೆ ಆಧಾರನೇ, ಅವಿರತವಾಗಿ ಶ್ರೀಹರಿಯಲ್ಲಿ ಆಸಕ್ತರಾಗಿ ನಿರ್ವಿಕಾರವಾದ ಮನಸ್ಸುಳ್ಳ, ಮನನಶೀಲನಾದ ಶ್ರೀಹರಿಗೆ ಅತ್ಯಂತಪ್ರಿಯನಾದ, ***मन्यु: सौन्दर्ये*** ಎಂಬ ವಚನದಂತೆ ಸುಂದರನಾದ ಸೀತಾರಾಮನ ಸಂದೇಶವನ್ನು ಹರಿಸಿದ ಹನುಮಂತನೇ, **त्वं** ನೀನು **तवस:** ಬಲಿಷ್ಠರಾದವರಿಗೂ, **तवीयान्** ಬಲಿಷ್ಠನಾಗಿದ್ದೀಯ.

ದೇಶಕಾಲ ಪರಿಚ್ಛಿನ್ನರಾದ ಸೂರ್ಯಾದಿಗಳಿಗೆ ತೇಜಸ್ಸನ್ನು ಕೊಡುವವನಾಗಿದ್ದೀಯೇ. ***तराय मारुताय स्तवसे*** ಎಂಬ ಶ್ರೂತಿಯಲ್ಲಿ ***स्तवसे*** ಸ್ವಬಲಯುಕ್ತನಾದ, ತತ್ಸ್ವರೂಪನಾದ ಮಾರುತಿಗೆ ಎಂಬ ಅರ್ಥವು ನಿರೂಪಿತವಾಗಿದೆ, ***तुरो वेगा हरि: वायु:*** ಎಂಬ ವಾಕ್ಯದಲ್ಲಿ ಅತ್ಯಂತ ವೇಗವಾಗಿ ಭಕ್ತರನ್ನು ರಕ್ಷಿಸುವ, ಮುಖ್ಯಪ್ರಾಣನೇ, **अभि इहि** ನಮ್ಮನ್ನು ರಕ್ಷಿಸಲು ಎಲ್ಲಾ ಕಡೆಯಿಂದ ಬಾ, ಅಥವಾ ನಮ್ಮ ಶತ್ರುಗಳನ್ನು ದೂರ ಓಡಿಸು.

**साहसा तपसा युजा** ಅತ್ಯುಗ್ರವಾದ ತಪಸ್ಸು, ವೈರಾಗ್ಯ, ಬ್ರಹ್ಮಚರ್ಯ, ಜ್ಞಾನ ಧ್ಯಾನ, ತಪೋಶ್ವೈರ್ಯಾದ್ಯನಂತ ಸಾಮರ್ಥ್ಯದಿಂದ ಭಕ್ತಾನುಗ್ರಹಕಾರಕ ಗುಣಗಳಿಂದ ಕೂಡಿದವನಾಗಿ, **न:** ನಮ್ಮನ್ನು, **शत्रून्** ಬಾಹ್ಯಾಭ್ಯಂತರ ಶತ್ರುಗಳನ್ನು **वि जहि** ಇನ್ನೊಮ್ಮೆ ಅವರಿಂದ ಬಾಧೆಯಾಗದ ರೀತಿಯಲ್ಲಿ ಸಂಹರಿಸು. ***अयं वै यमो योऽयं वायु: पवन:*** ಎಂದ ಶತಪಥದಲ್ಲಿದೆ, ***रोगहा वायु:*** ಎಂದು ಋಗ್ಭಾಷ್ಯದ ವಚನವು. ***जन्माधिव्याध्युपाधि प्रतिहति विरह प्रापकाणाम्, जरयित: जन्ममृत्यामयानाम्*** ಎಂದು ವಾಯುಸ್ತುತಿ, ***जरयिता शोषयिता*** ಎಂದು ದುರ್ಗಾದಾಸರ ವ್ಯಾಖ್ಯಾನವು.

**अमित्रहा** ಸುಜನರಾದವರಿಗೆ ಕಂಠಕರಾದ ಕಿರ್ಮೀರ, ಬಕ, ಮಣಿಮಂತಾದಿ ದೈತ್ಯರುಗಳನ್ನು ಸಂಹರಿಸಿದ, **वृत्रहा** ಪಾಪಸಮೂಹಕ್ಕೆ ಅಥವಾ ದುರಾಸೆಗಳಿಗೆ ನಾಶಕರ್ತಾ, ಅಥವಾ ವಿಮಲಜ್ಞಾನಾಚ್ಛಿದಕವಾದಾವಿದ್ಯೇಯನ್ನು ಸಂಹರಿಸು. ಅಂತಹ ನೀನು **तवसोऽसि** ಇವೆಲ್ಲಾ ಮಾಡಲು ಸಮರ್ಥನಾಗಿದ್ದೀಯೆ. ಅಂತಹ ನೀನು **न:** ನಮ್ಮಗಳಿಗೆ, **विश्वा वसूनि** ಗೋ ಹಿರಣ್ಯಜ್ಞಾನಾದಿ ಸಂಪತ್ತುಗಳನ್ನು **आ भर** ಕೊಡು ಪಾಲಿಸು.

## मन्त्र ४

संहिता – **त्वं हि मन्यो अभिभूत्योजाः**
**स्वयंभूर्भामो अभिमातिषाहः ।**
**विश्वचर्षणिः सहुरिः सहावा**
**नस्मास्वोजः पृतनासु धेहि ।। ४ ।।**

पदपाठः – त्वम् । हि । मन्यो इति । अभिभूतिऽओजाः । स्वयंऽभूः ।
भामः । अभिमातिऽसहः । विश्वऽचर्षणिः । सहुरिः ।
सहावान् । अस्मासु । ओजः । पृतनासु । धेहि ।।४।।

ಸಂಹಿತಾ – **ತ್ವಂ ಹಿ ಮನ್ಯೋ ಅಭಿಭೂತ್ಯೋಜಾಃ**
**ಸ್ವಯಂ ಭೂರ್ಭಾಮೋ ಅಭಿಮಾತಿಷಾಹಃ।**
**ವಿಶ್ವಚರ್ಷಣಿಃ ಸ ಹುರಿಃ ಸಹಾವಾ**
**ನಸ್ಮಾಸ್ವೋಜಃ ಪೃತನಾಸು ಧೇಹಿ ।।೪।।**

'ಹೆ **मन्यो,** ಮನ್ಯುನಾಮಕನಾದ ನರಸಿಂಹನೇ, **अभिभूत्योजाः** ಪರರನ್ನು ನಿಗ್ರಹಿಸುವ ಓಜಸ್ಸುಳ್ಳವನಾದ, **स्वयंभूः** ತಾನೇ ತನ್ನ ರೂಪಗಳನ್ನು ಅಭಿವ್ಯಕ್ತಿಪಡಿಸುವ, ಸ್ತಂಭದಿಂದ ನರಸಿಂಹರೂಪದಿಂದ ಅಭಿವ್ಯಕ್ತನಾದವನು ಎಂದು ತಾತ್ಪರ್ಯವು, **भामः** ಅಭಿವ್ಯಕ್ತವಾದ ಜ್ಞಾನಸ್ವರೂಪವುಳ್ಳವನೇ, ***भादीसौ माङ् माने इति धातोः औणादिको डप्रत्ययः*** ಬಂದಾಗ ಈ ರೂಪವಾಗುತ್ತದೆ, **अभिमातिषाहः** ಶತ್ರುಗಳನ್ನು ಸಹಿಸುವ ಸ್ವಭಾವವುಳ್ಳವ, ***षह मर्षणे इति धातो औणादिको डप्रत्ययः***

**विश्वचर्षणिः** ಸಮಸ್ತ ಜಗತ್ತನ್ನೇ ಪ್ರಜೆಗಳಾಗಿವುಳ್ಳವ **सहुरिः** ಸಹನಶೀಲನಾದ, **सहवान्** ಬಲಿಷ್ಠನಾದ, ತೇಜಸ್ವಿಯಾದ ನೀನು, **अस्मासु** ನಮ್ಮ ಸಂಬಂಧಪಟ್ಟ **पृतनासु** ಸೇನೆಗಳಲ್ಲಿ **ओजः** ಬಲವನ್ನು, **धेहि** ಕೊಡು, ಅಥವಾ **पृतनासु** ನಮ್ಮ ಸಾಧನೆಗಳಿಗೆ ಸೈನ್ಯರೂಪವಾದ ಇಂದ್ರಿಯಗಳಲ್ಲಿ, ಸಾಧನೆ ಮಾಡಲಿಕ್ಕೆ ಬಲವನ್ನು ಇಡು.

[1]*हे* **मन्यो** *मनधातुर्धृत्यर्थः* ಎಂಬ ವಚನದಂತೆ ಧೃತಿಸ್ಮೃತ್ಯಾದಿ ಶ್ರೇಷ್ಠಗುಣಪರಿಪೂರಿತನಾದ ವಾಯವೇ,
*ज्ञाने विरागे हरिभक्तिभावे धृतिस्थितिप्राणबलेषु योगे ।*
*बुद्धौ च नान्यो हनूमत्समानः पुमान् कदाचित् क्वच कश्चनैव* ಎಂದು ವಚನವು,
*मन्यति मनतिश्च स्मृणोतौ इति मन्युः स्मृत्यर्थः।*
*तत्वज्ञाने विष्णुभक्तौ धैर्ये स्थैर्ये पराक्रमे ।*
*वेगे च लाघवे चैव प्रतापस्य च वर्जने । भीमसेन समोनास्ति* ಎಂದು ನಿರ್ಣಯದ ವಚನ, **मन्यु** *विद्वान् विद्वान् मध्वः* ಎಂದು ಶೃತಿಯು.

**अभिभूत्योजाः** ಶತ್ರುಗಳ ಸಾಮರ್ಥ್ಯವನ್ನು ಅಪಹರಿಸುವ, *अभिभूतकारि ओजः यस्य सः* ಎಂದು ಮಧ್ಯಮ ಪದಲೋಪಸಮಾಸ ಮಾಡಿದರೆ, ಇನ್ನೊಬ್ಬರ ಔಜಸ್ಸನ್ನು ತಿರಸ್ಕರಿಸುವ.

**स्वयम्भू** [1]*स्वयं विष्णुः तस्माद् भवतीति* ಪರಮಾತ್ಮನ ದೆಸೆಯಿಂದ ಉತ್ಪನ್ನನಾದವನು, *विष्णुजत्वाद्धि स्वयंभूरिति विरिञ्च उच्यते* ಎಂದು ವಚನವಿದೆ. *मुख्यप्राणः तदुद्भवः* ಎಂದು ವಚನ, *स्वयंभू ब्रह्मसञ्ज्ञासौ* ಎಂದು ಪ್ರಮಾಣ, [2]*स्वयं रमेशप्रेरणया स्वेच्छया कर्मसम्बन्धं विना अवतरतीति* ಶ್ರೀಹರಿಯ ಪ್ರೇರಣೆಯಿಂದ ಕರ್ಮಸಂಬಂಧವಿಲ್ಲದೆ ಅವತರಿಸುವನು. [3]*स्वयं श्रीहरे सर्वार्थं भूः अवतीर्णः* ಶ್ರೀಹರಿಯ ಸೇವೆಗೆ ಅವತರಿಸಿದನು, [4]*स्वयमेव भूः पूर्णः* ಸಕಲಶುಭಗುಣಗಳಿಂದ ಪೂರ್ಣನು, *स्वयम्भूः प्राण उच्यते, प्राणो वा आशायाः भूयान्* ಎಂದು ಉಪನಿಷತ್, *प्राणोवा सर्वेभ्यः भूयान्* ಎಂದು ಕೌಶರವ್ಯಶೃತಿಯು ಇದೆ, [5]*सु शोभने पूजायाश्च अयं ज्ञानं भू प्राप्तः, द्वितीयायाः लुक्* ನಿರವಧಿಕ ಪವಿತ್ರವಾದ ಜ್ಞಾನವುಳ್ಳವನು, ಭಗವಂತನಲ್ಲಿ ಅತಿಶಯಭಕ್ತಿಯಿಂದ ಶ್ರೀಹರಿಯ ಉಪಾಸನೆಗೇ ಭೂಮಿಯಲ್ಲಿ ಪ್ರಾಪ್ತನಾದವನು,

[6]*सु अयं सम्यक् ज्ञानम् अन्यान् भावयतीति बोधयतीति यावत्।* ಇನ್ನೊಬ್ಬರಿಗೆ ಉತ್ತಮವಾದ ಶ್ರೀಹರಿಯ ಜ್ಞಾನವನ್ನು ಬೋಧಿಸುವವನು, [7]**स्वयम्भूः** *स्वत एव स्वेतरजीवापेक्षया गुणपूर्णः* ಬೇರೆ ಜೀವಗಳಿಕ್ಕಿಂತ

ಹೆಚ್ಚಿನ ಜ್ಞಾನವುಳ್ಳವನು, [8]**स्वयं परमात्मनि भू शुद्धौ क्वापि शुद्धः** ಪರಶುಕ್ಲತ್ರಯನಾದವನು, [9]ಪರಮಾತ್ಮ ವಿಷಯಕ ಯಥಾರ್ಥ ಜ್ಞಾನದ ನಿಶ್ಚಯದಿಂದ ಅಭಿವ್ಯಕ್ತವಾದವನು, **जनितोऽत विष्णोः** ಎಂದು ಶ್ರುತಿಯು,.

**भामः** [1]ಅಪರಿಮಿತವಾದ ಜ್ಞಾನಪ್ರಕಾಶ ಸ್ವರೂಪನಾದ, ಸುಂದರವಾದ ತೇಜಸ್ಸುಳ್ಳವ, **प्राणो वै ज्योतिः** ಎಂದು ಶತಪಥಬ್ರಾಹ್ಮಣ, **वायुः ज्योतिः वायुना ज्योतिषा इति ह वै विज्ञायत इति च श्रुतिः इति दुर्गादासः** ದುರ್ಗಾದಾಸರು ಈ ಶ್ರುತಿಯನ್ನು ಉದಾಹರಿಸಿದ್ದಾರೆ, ಇಲ್ಲಿ ವಾಯುದೇವರೇ ಜ್ಯೋತಿರೂಪವೆಂದು ನಿರೂಪಿತವಾಗಿದೆ, [2]**भामः पूज्यः** ಎಂದು ಪದರತ್ನಾವಲಿ ಎಂಬ ಗ್ರಂಥದಲ್ಲಿ ಹೇಳಿರುವಂತೆ, ಸುರನರಾದಿ ಸಕಲ ಸಜ್ಜನರಿಂದ ಪೂಜಿತನು, **त्रैलूक्याचार्यः** ಎಂದು ವಾಯುಸ್ತುತಿಯಲ್ಲಿ ಉಲ್ಲಿಖಿತವಾಗಿದೆ, [3]ಭಕ್ತರಿಂದ ಸ್ತುತನಾದವನು ಭಕಾರ ಮಕಾರಾದಿ ಧಾತುಗಳಿಗೆ ಅನೇಕಾರ್ಥಗಳು ಕಂಡಿರುವುದರಿಂದ ಅನೇಕಾನೇಕಾಗುಣವಂತ.

**अभिमातिषाहः** ದುರ್ಮತಗಳನ್ನು ಧ್ವಂಸಿಸುವವನು, ಅಭಿಮಾನಿಗಳಾದ ದೈತ್ಯರನ್ನು ಹಿಂಸಿಸುವವನು, **विश्वचर्षणिः** [1]ವಿಶ್ವಶಬ್ಧವಾಚ್ಯನಾದ ನರನೆಂಬ ವಾಯುದೇವರ ಮೂರ್ತಿಯು, ಸಕಲಮನುಷ್ಯಕುಲಕ್ಕೆ ಜೀವನಾಧಾರ, [2]ನಾರಾಯಣನನ್ನು ಸಾಕ್ಷಾತ್ತಾಗಿ ಪೂಜಿಸುವ, ಅವ್ಯಾಕೃತಾಕಾಶವ್ಯಾಪ್ತವಾದ ಸಕಲಾವಯವ ಸಂಪನ್ನನಾದ ಶ್ರೀ ಹರಿಯನ್ನು ನೋಡುವ, **विद्युद्वत्मानुषा मुक्ताः सूर्यमण्डल वस्तुशः। प्रतिबिम्बवच्च गिरिशो ब्रह्मैनं पश्यति स्पृष्टम्** ಎಂದು ತೈತ್ತರೀಯಭಾಷ್ಯದಲ್ಲಿ ನಿರೂಪಿತವಾಗಿದ,

[3]ಎಲ್ಲಾ ಜೀವರೂ ಮಾಡಿರುವ ಶುಭಾಶುಭ ಕರ್ಮಗಳನ್ನು ನೋಡುವ, [4]ವಿಶೇಷವಾದ ಜ್ಞಾನವುಳ್ಳವ ಸರ್ವಜ್ಞ, [5]ಸಕಲ ಜಗತ್ತನ್ನೂ ತನ್ನ ಕಡೆಗೆ ಆಕರ್ಷಣ ಸ್ವಭಾವವುಳ್ಳವ, [6]ಭಗವಂತನ ಸೇನಾನಿ, **चषणिश्चमूस्थन्नाथत्वात्मन्योश्चमूश देन व्यवहतिः** ಎಂಬ ವಚನವಿದೆ, [7]ಪ್ರಾಣನೆಂಬ ಅಗ್ನಿಯು, **प्राणो अग्निः** ಎಂದು ಶತಪಥಬ್ರಾಹ್ಮಣದಲ್ಲಿದೆ, [8]ಪರಮಾತ್ಮನಿಂದ ಜ್ಞಾನಪಡೆದವರು ಮಧ್ವಾಚಾರ್ಯರು. [9]ಸಕಲಮುಕ್ತಿಯೋಗ್ಯರಿಗೂ ಜ್ಞಾನಪ್ರದಾತಾ,

**सहुरिः** [1]ಕ್ಷಮಾಗುಣವುಳ್ಳವ, [2]ಸ್ಥಿರನಾದವ, [3]ಭೂಮಿಗೆ

ಅಭಿಮಾನಿಯಾದ ರುದ್ರದೇವರ ಜನಕ, *प्राणो मन्युः ततश्चान्नाभिधो हरः* ಎಂದು ಛಾಂದೊಗ್ಯ ವಚನವು, *जुहोते क्विन् हुरिः होता* ವಿಷ್ಣುಪರಮಾತ್ಮನಿಂದ ಸದಾ ಸಹಿತನಾದವನು, [4]ಎಲ್ಲ ಕಾಲದಲ್ಲಿಯೂ ಶ್ರೀಹರಿಯ ಜ್ಞಾನವುಳ್ಳವನು *अतिरोहितविज्ञानात् वायुरप्यमृतः स्मृतः* ಎಂದು ವಚನವು. [5]*जुहोते, ह्वयतेः वा क्विन्, औणादिको बाहुलिकत्वात् सम्प्रसारणदीर्धाभावः हुरिः* ಎಂದು ಹೆಸರು. ಶ್ರೀಹರಿಗೆ ಸಮಾನವಾಗಿ ಹೆಸರುಳ್ಳವನು. [6]ವಿಷ್ಣುವಿಗೆ ಬಂಧುವು. *उरुक्रमस्य हि बन्धुः* ಎಂದು ಶೃತಿಯು. [7]*सहुरि ह्यन्धकारः* ಎಂಬ ವಚನದಂತೆ ದೈತ್ಯರಿಗೆ ಭಗವಂತನ ಜ್ಞಾನವಾಗದಂತೆ ಮಾಡುವವನು.

**सहवान्** ಬಲಿಷ್ಠನಾದ, ಈ ರೀತಿಯಲ್ಲಿರುವ, **मन्यो** ವಾಯುದೇವರೇ, **अस्मासु पृतनासु** ನಮ್ಮನ್ನು ಗೆಲ್ಲುವ ದೈತ್ಯರುಗಳನ್ನು ನಿಗ್ರಹಿಸಲು, **ओजः** ಸಾಮರ್ಥ್ಯ ಕೀರ್ತ್ಯಾದಿಗಳನ್ನು, **हि** ನಿತ್ಯವಾಗಿ, **धेहि** ಕೊಡು.

### मन्त्र ५

संहिता – **अभागः सन्नप परेतो अस्मि**
**तव क्रत्वा तविषस्य प्रचेतः ।**
**तं त्वा मन्यो अक्रतुर्जिहीळाहं**
**स्वा तनूर्बलदेयाय मेहि ।। ५ ।।**

पदपाठः – अभागः । सन् । अप । पराऽइत । अस्मि । तव ।
क्रत्वा । तविषस्य । प्रचेत इति प्रऽचेतः । तं । त्वा ।
मन्यो इति । अक्रतुः । जिहीळ । अहं । स्वा । तनूः ।
बलऽदेयाय । मा । आ । इहि ।। ५ ।।

ಸಂಹಿತಾ – ಅಭಾಗಃ ಸನ್ನಪ ಪರೇತೋ ಅಸ್ಮಿ
ತವ ಕ್ರತ್ವಾ ತವಿಷಸ್ಯ ಪ್ರಚೇತಃ ।
ತಂತ್ವಾ ಮನ್ಯೋ ಅಕ್ರತುರ್ಜಿಹೀಳಾಹಂ
ಸ್ವಾತನೂರ್ಬಲದೇಯಾಯ ಮೇಹಿ ।।೫।।

[1]**प्रचेतः** ಪ್ರಕೃಷ್ಟವಾದ ಜ್ಞಾನವುಳ್ಳ, **मन्यो** ಮನ್ಯುನಾಮಕನಾದ ಶ್ರೀಹರಿಯೇ, **त्वा** ನಿನ್ನನ್ನು, **अप** ಬಿಟ್ಟು, **क्रत्वा** ಯಜ್ಞಾದಿ ಸತ್ಕಾರ್ಯಗಳಿಂದ, **तविषस्य** ಬಲಿಷ್ಠನಾದ, ಪೂಜ್ಯನಾದ, **तव** ನಿನಗೆ, **अहम्** ನಾನು, **अभागः सन्** ಯಜ್ಞಾಭಾಗವನ್ನು ಕೊಡದೆ, **परेतः** ಶತ್ರುಗಳಿಂದ ಆಕ್ರಮಿಸಲ್ಪಟ್ಟವನಾಗಿ **असि** ಆಗಿದ್ದೇನೆ.

**अक्रतुः** ನಿನ್ನನ್ನು ಉದ್ದೇಶಿಸಿ ಪೂಜಿಸಿದ ತ್ಯಾಗಜಪಾದಿರಹಿತನಾದ, **अहम्** ನಾನು, **तम्** ಅಂತಹ ಮಹಿಮೋಪೇತನಾದ **त्वा** ನಿನ್ನನ್ನು, **जिहीळा** ಬಿಟ್ಟಿದ್ದೇನೆ. ಆದು **अहम्** ನಾನು, **तनूः** ಶರೀರವು **तव** ನಿನ್ನಿಂದ ನಿಯಮ್ಯನು. ***यस्यात्मा शरीरम् य आत्मानमन्तरो रमयति*** ಎಂಬ ಶ್ರುತಿಗಳಲ್ಲಿ ಈ ವಿಷಯವು ನಿರುಪಿತವಾಗಿದೆ. ಆದ್ದರಿಂದ **बलदेयाय** ನನಗೆ ಶತ್ರುಗಳನ್ನು ನಿಗ್ರಹಿಸಲಿಕ್ಕೆ ಬಲವನ್ನು ಕೊಡಲಿಕ್ಕೆ **मा आ इहि** ನನ್ನಲ್ಲಿ ಬಾ ಸನ್ನಿಹಿತನಾಗು.

**मन्यो** [1]ಮನ್ಯುಶಬ್ದವಾಚ್ಯನಾದ ತಾಪಸರುದ್ರೇಶನಾದ, ಶ್ರೀಹರಿಯ ಸೇವೆಯಲ್ಲಿ ಶ್ರದ್ಧೆಯುಳ್ಳವನೇ, [2]ಸರ್ವಜ್ಞನಾಗಿದ್ದರೂ ಸದಾ ಶ್ರೀಹರಿಯ ಸಂತೋಷಕ್ಕಾಗಿ ಶ್ರವಣಮನನಗಳನ್ನು ಮಾಡುವ ಮುಖ್ಯಪ್ರಾಣನೆ, **तविषस्य** [1]***ताविषःस्वर्लोकः सत्यलोको वा सोऽस्यस्तिति तविषः*** ಸತ್ಯಲೋಕೇಶ್ವರನಾದವನೇ, [2]***तविषी बलम्*** ಎಂಬ ವಚನದಂತೆ ಅತ್ಯಂತಬಲಿಷ್ಠನಾದವ, [3]***तविषी गङ्गा*** ಎಂಬಂತೆ ಗಂಗೆಗೆ ಈಶನಾದ ರುದ್ರದೇವರಿಗೆ ಒಡೆಯನಾದವ, [4]***तविषी सेना*** ಎಂಬಂತೆ ಸೇನಾನಾಯಕನಾದ, [5]***तविषी भूमिः*** ಎಂಬಂತೆ ಭೂಮಿಯನ್ನು ತನ್ನ ವಶದಲ್ಲಿ ಇಟ್ಟುಕೊಂಡಿರುವ.

**तव** ನಿನ್ನ **क्रत्वा** ಕರ್ಮಜ್ಞಾನ ಸಂಕಲ್ಪಗಳಿಂದ, **हे सन्** ನಿತ್ಯಜ್ಞಾನ ಸ್ವರೂಪನಾದ, ***सत्पाणः, सदिति प्राण इति श्रुतेः, ज्ञानरूपेण वायुना*** ಎಂಬ ಭಾಷ್ಯವಚನ, ಮುಖ್ಯಪ್ರಾಣನೇ, **अभागः सन्** ಭಾಗ್ಯಹೀನನಾದ, ಸರ್ವಜ್ಞತ್ವ, ಕರ್ತೃತ್ವಾದಿ ಗುಣಗಳಿಂದ ಕೂಡಿದ ನಿನ್ನ ಸಮನಾಗಲು ಯಾವಾಗಲೂ ಸಾಧ್ಯವಾಗದವನು, **अहम्** ನಾನು **असि** ಆಗಿದ್ದೇನೆ. ನಿನ್ನನ್ನೇ ತಿಳಿಯಲು ಅಸಾಧ್ಯನಾದ ನಾನು ನಿನ್ನ ತಂದೆಯಾದ ಶ್ರೀಹರಿಯನ್ನು ತಿಳಿಯಲು ಸಾಧ್ಯವೇ?

**अपपरेतः** ***पर परमात्मा*** ನಿನ್ನ ಸಂಬಂಧವಿಲ್ಲದೇ ಶ್ರೀಹರಿಯ

ಸಂಬಂಧ ರಹಿತನಾದ **परं** *श्लाघ्यम्* ಅಶ್ಲಾಘ್ಯಗುಣಗಳಿಂದ ಕೂಡಿದ, ದೂಷವಂತ, **अस्मि** ಆಗಿದ್ದೇನೆ. **प्रचेतः** *प्रचेता जातवेदा अग्निः* ಎಂಬ ಶಾಕಪಾಣಿಯ ವಚನದಂತೆ ಅಗ್ನಿಯಂತೆ ಪ್ರಜ್ವಲಿಸುವ ಉತ್ತಮವಾದ ಜ್ಞಾನವುಳ್ಳವನೇ, **अक्रतुः** ಜ್ಞಾನಕರ್ಮಗಳಿಂದ ದೂರನಾದ, ನಿನ್ನ ಪ್ರಸಾದದಿಂದ ಭಗವಂತನ ನಿಶ್ಚಯಾತ್ಮಕವಾದ ಜ್ಞಾನವುಳ್ಳ, **अहम्** ನಾನು, **त्वा** ನಿನ್ನನ್ನು **जिहीळ** ದೀನದೂನನಾಗಿ ಜ್ಞಾನಕ್ಕಾಗಿ ಆಶ್ರಯಿಸಿದೇನೆ.

**स्वा तनूः** [1]ನಮ್ಮಂತೆ ಜೀವಕೋಟಿಪ್ರವಿಷ್ಟನಾಗಿದ್ದರೂ ಜೀವೋತ್ತಮನಾಗಿದ್ದೀಯೆ. [2]ಸ್ವರೂಪದಿಂದ ಲಕ್ಷಿತವಾದ ಸಹಭೋಗವಾದ ಸತ್ಯಲೋಕೇಶ್ವರನಾಗಿದ್ದೀಯಾ, **स्वा** [1]*स्वा हिरण्यं महाप्रकाशो ज्योतिरिच्यते ज्योतिर्वै हिरण्यम्, ज्योतिरेषोऽमृतो हिरण्यम्* ಎಂದು ಶತಪಥ ಬ್ರಹ್ಮಣ. [2]**स्वा सुखस्वरूपम्** तनूः देहः **स्वरूपं वा यस्य** ಎಂದು ವಿಗ್ರಹಿಸಿ ಸುಖಸ್ವರೂಪನಾದ **स्वा** ಎಲ್ಲಾ **तनू** ನಾಮಗಳುಳ್ಳವನಾಗಿದ್ದೀಯೆ,

**बलदेवाय** ಶರೀರಾದಿ ಸರ್ವಬಲವನ್ನು ಪೋಷಿಸಲು, ಭಗವತ್ತತ್ವಧಾರಣೆಯ ಶಕ್ತಿಗಳನ್ನು ಕೊಡಲು, ನಿನ್ನ ಭಕ್ತರನ್ನು ಉದ್ಧರಿಸಲು, **मा आ इहि** ಶೀಘ್ರವಾಗಿ ನನ್ನ ಹತ್ತಿರ ಬಾ. ಶ್ರೀಹರಿಯನ್ನು ಆಶ್ರಯಿಸಿರುವ ನಿನ್ನ ಸನ್ನಿಧಾನದಿಂದ ಶ್ರೀಹರಿಯ ಸನ್ನಿಧಾನವು ನಮ್ಮಲ್ಲಿ ಬರುತ್ತದೆ.

*तुष्टे ब्रह्मणि विष्णुश्च तुष्टो लोकान् प्रदास्यति ।*
*अगम्यत्वात् हरिस्तस्मिन् आविष्टो मुक्तिदो भवेत्* ಎಂದು ವಚನವಿದೆ.

*सज्ज्ञानायान्दविज्ञानमूर्ती प्राप्तौ पृथ्वीमाश्रमे तत्र तावत्।*
*जाज्वल्येते विष्णुवायू स्म देवौ वेदव्यासानन्दतीर्थाभिधानौ*
ಎಂದು ಶ್ರೀ ಸುಮಧ್ವವಿಜಯ ವಚನವಿದೆ.

### मन्त्र ६

संहिता – **अयं ते अस्म्युप मे ह्य॒र्वाङ्**
**प्रतीचीनः संहुरे विश्वधा यः ।**

**मन्यो वज्रिन्नभि मा मा ववृत्स्व**
**हनाव दस्यूँ रुत बोध्यापेः ॥ ६ ॥**

संहिता – अयं । ते । अस्मि । उप । मा । आ । इहि । अर्वाङ् । प्रतीचीनः । सहुर । विश्वऽधायः । मन्यो इति । वज्रिन् । अभि । माम् । ववृत्स्व । हनाव । दस्यून् । उत । बोधि । आपेः ॥ ६ ॥

ಸಂಹಿತಾ – **ಅಯಂ ತೇ ಅಸ್ಮ್ಯುಪಮೇಹ್ಯರ್ವಾಙ್**
**ಪ್ರತೀಚೀನಃ ಸಹುರೇ ವಿಶ್ವಧಾಯಃ ।**
**ಮನ್ಯೋ ವಜ್ರಿನ್ನಭಿ ಮಾಮಾ ವವೃತ್ಸ್ವ**
**ಹನಾವ ದಸ್ಯೂರುತ ಬೋಧ್ಯಾಪೇಃ ॥೬॥**

'हे **सहुरे** *षह मर्षणे, ततो उरिन्, इति रूपम्* ಶತ್ರುಗಳನ್ನು ಮರ್ಧಿಸುವ ಸ್ವಭಾವವುಳ್ಳವನೆ, **विश्वधा** ಜಗತ್ಪ್ರವರ್ತಕನಾದ, **यः** ಜ್ಞಾನಸ್ವರೂಪಿಯಾದ, **वज्रिन्** ದೋಷರಹಿತನಾದ, ***वर्जनाद् वज्र उच्यते*** ಎಂದು ವಚನವು. ಅಥವಾ ವಜ್ರಾಯುಧವನ್ನು ಧರಿಸಿದವನೇ, **अयं** ಈ ಜನರು, ನಾನೂ ಸಹ, **ते** ನಿನ್ನವರಾಗಿ **अस्मि** ಇದ್ದಾರೆ. ಅಥವಾ ನಿನ್ನ ಆಜ್ಞಾನೆಯಂತೆ ನಿನ್ನ ಕರ್ಮಗಳನ್ನು ಮಾಡುವವರಾಗಿದ್ದಾರೆ, ಆದ್ದರಿಂದ ನೀನು **मा** ನನ್ನ **उप** ಸಮೀಪದಲ್ಲಿ **आ इहि** ಬರುವವನಾಗು, ನೀನು ಸ್ವಾರ್ಧಾರನಾಗಿದ್ದೀಯೆಂದು ಹೇಳುತ್ತಾರೆ.

**अर्वाङ्** ಕೆಳಗಿನಲೋಕಗಳಲ್ಲಿರುವ **विश्वधा** ಸಮಸ್ತ ಪ್ರಪಂಚನಧಾರಣೆ ಪೋಷಣೆಗಳನ್ನು ಮಾಡುವವನು, **उत** ಮತ್ತು , **प्रतीचीनः** ಮೇಲಿನ ಲೋಕಗಳಲ್ಲಿ ನೀನು ಧಾರಣಪೋಷಣಕರ್ತನಾಗಿದ್ದಿಯೆ. ಆದ್ದರಿಂದ ನೀನು, **अभि** ಎಲ್ಲದಿಕ್ಕುಗಳಿಂದಲೂ **मा** ನನಗೆ, **अपिः** ***आ समन्तात् पिबिति स्वरूपानन्दमिति आपेः तत्वज्ञानम्*** ತತ್ವಜ್ಞಾನವನ್ನು **बोधि** ತಿಳಿಸು ಭೋದಿಸು, ದ್ವಿತೀಯ ವಿಭಕ್ತಿಯ ಅರ್ಥದಲ್ಲಿ ಷಷ್ಠೀ ವಿಭಕ್ತಿಯಿದೆ.

'हे **मन्यो** [1]ಪ್ರಳಯಕಾಲದಲ್ಲಿ ಜಗತ್ತಿನ ದಹನಶೋಷಣನಾಶಗಳನ್ನು

ಮಾಡುವವನೆ, *अत्ता विश्वस्य संहर्ता* ಎಂದು ಷಟ್‌ಪ್ರಶ್ನಭಾಷ್ಯ, ***ब्रह्मा स कालमानितु संहर्तॄणां प्रभुः स्मृतः*** ಎಂದು ತಾತ್ಪರ್ಯ, [2]ವಿಪರೀತ ಜ್ಞಾನವುಳ್ಳವರಲ್ಲಿ ಕ್ರೋಧವುಳ್ಳವನೆ, **सहुरे** ಕ್ಷಮಾಸಮುದ್ರನೇ, ಶ್ರೀಹರಿಯಲ್ಲಿ ಹಾಗು ರಮಾದೇವಿಯರಲ್ಲಿ ಸದಾ ಕ್ರೋಧರಹಿತನಾದವನೇ, ***क्षात्रं धर्मं स्ववता केशवाज्ञया सर्वं सेहे भीमेन*** ಎಂದು ಯಮಕಭಾರತ, [3]ಶ್ರೀಹರಿಯ ಪ್ರಸಾದಕ್ಕೆ ಕಾರಣವಾದ ಪೂರ್ಣಬಲಜ್ಞಾನ ಸ್ವರೂಪನೇ, [4]ಕಲ್ಯಾದಿದೈತ್ಯರ ಉಪದ್ರವಗಳನ್ನು ಸಹಿಸುವ ಶಕ್ತಿಯುಳ್ಳವನೇ, [5]ಶೀಘ್ರವಾಗಿ ಭಕ್ತರಸಮೀಪಕ್ಕೆ ಹೋಗುವವನೇ, ***ओजस्वनभिभाव्यत्वात् सहश्च स्वेच्छया कृतेः । बलं विधारकत्वाच्च विधृतिः वायुरुच्यते*** ಎಂದು ತಾತ್ಪರ್ಯವಚನವು, ಅಲ್ಲಿ ***द्रविणं तरः सहो बलम्*** ಎಂದು ವ್ಯಾಖ್ಯಾನಿಸಲಾಗಿದೆ. ***स ह धातुः तृप्तिशक्त्यवरोध-प्रतिघातकान्तिसम्भक्त्याश्चर्यविस्मयसहसाकम्पनाकुलीभावलोटनपश्यतिकर्मसु*** ಎಂದು ಹೇಳಲ್ಪಟ್ಟಿದೆ. ಅಖಂಡಭಗವಂತನ ಭಕ್ತಿಯ ಭಾವದಿಂದ ತೃಪ್ತನೇ, ಅನಂತಶಕ್ತಿಶಾಲಿಯೇ, ವೈರಾಗ್ಯದಿಂದ ಕುಡಿದವನಾದ್ದರಿಂದ ವಿಷಗಳನ್ನು ಪ್ರತಿಪಾದಿಸುವವನೇ, ಅತ್ಯುಜ್ವಲ ಕಾಂತಿಯುಳ್ಳವನೆ, ಆದರದಿಂದ ಸದಾ ಹರಿಯ ಭಜನೆಯಲ್ಲಿ ನಿರತನೇ, ಅತ್ಯಾಶ್ಚರ್ಯನಾದವನೇ, ತನ್ನ ವೀರ್ಯವಿಕ್ರಮಶೌರ್ಯಾ ಭಯಾದಿಗಳಿಂದ ಎಲ್ಲರಲ್ಲಿಯೂ ಕಂಪನೆಯನ್ನು ಉತ್ಪಾದನೆಮಾಡುವವನೆ, ದುಷ್ಟ ಜನರಿಗೆ ಆಕುಲತೆಯನ್ನು ಹುಟ್ಟಿಸುವವನೇ, ಸ್ವಯಂ ಜಗತ್ತಿನಲ್ಲಿ ಪ್ರವೇಶಿಸಿ ಕಂಪನೆಯನ್ನು ಹುಟ್ಟಿಸುವವನೆ, ಶ್ರೀನಾರಾಯಣನ ಪಾದಕಮಲಗಳಲ್ಲಿ ಭಕ್ತಿಯ ಭಾವದಿಂದ ಅಲ್ಲೇ ತಿರುಗುವವನೆ, ರಮಾ ನಾರಾಯಣರನ್ನು ಬಿಟ್ಟು ಎಲ್ಲಾ ಜಗತನ್ನು ನಿಃಸಂಶಯವಾಗಿ ತಿಳಿದವನೇ, ***अन्यत्रालोचने सर्वविषयम्*** ಎಂದು ಪ್ರಮಾಣಲಕ್ಷಣದವಚನ,

**वज्रिन्** [1]ಎಲ್ಲಾ ಕಾಲದಲ್ಲಿಯೂ ಅನಾದಿನಿತ್ಯಜ್ಞಾನಿಯೇ, ***सविशेषं जगत् सर्वं भूतं भव्यं भवच्च यत्। आलोचनाच्च यज्ञामेम भासते परमाणुवत्*** ಎಂದು ಸತ್ತತ್ವರತ್ನಮಾಲೆಯಲ್ಲಿದೆ, ***एवं प्रलयकालेऽपि प्रतिभातपरावरः। वायुः नित्यसमः*** ಎಂದು ಅನುವ್ಯಾಖ್ಯಾನ, ***अतिरोहितविज्ञानाद्वायुरप्यमृतः स्मृतः*** ಎಂದು ಈಶಾವಾಸ್ಯಭಾಷ್ಯ, [2]***वज्र एव वाग्*** ಎಂದು ಐತರೇಯ. ತದಭಿಮಾನಿಯಾದ ಭಾರತೀದೇವಿಯರನ್ನೆ ಪತ್ನಿಯಾಗಿವುಳ್ಳವನೇ, [3]***विद्युत्पतिर्वायुरेव*** ಎಂದು ಭಾಷ್ಯ. ಎಲ್ಲಾ ಜಗತನ್ನು

ಚೇಷ್ಟಿಸುವ ಶ್ರೀಹರಿಯೇ ಸ್ವಾಮಿಯಾಗುಳ್ಳವನೇ, [4]***वज्रो वा एष यद्यूप:*** ಎಂದು ಐತರೇಯ ಬ್ರಾಹ್ಮಣದಲ್ಲಿರುವಂತೆ ಯೂಪಾಧಿಷ್ಠಾತಾ ಚತುರ್ಮುಖನೇ, ***अहङ्कार: पशु: ओंकार: यूप:*** ಎಂದು ಶ್ರುತಿಯು, ***ओङ्कार वाच्य: चतुर्मुख:। ओङ्कारवाच्यं पूर्ण हरि: करोति प्रतिपादयतीति।*** [5]**ऋजिषी वज्रि** ಎಂದು ಶ್ರುತಿಯನ್ನು ಅನುಸರಿಸಿ ಋಜುವಾದ ಜ್ಞಾನ ಸ್ವರೂಪನೇ, **अयम्** ನಾನು ಮತ್ತು ಜನರು, **ते** ನಿನ್ನ **अस्मि** ದಾಸರಾಗಿದ್ದೇವೆ.

ಆದ್ದರಿಂದ **मा उप आ इहि** ನನ್ನ ರಕ್ಷಣೆಗೆ ಸಮೀಪದಲ್ಲಿ ಬರುವವನಾಗು, **विश्वधाय:** [1]ಬ್ರಹ್ಮಾಂಡಕ್ಕೆ ಸೃಷ್ಟಿಕರ್ತಾ, ಧಾರಕ, ಪೋಷಕಸೂತ್ರನಾಗಿದ್ದೀಯಾ, ***स्यूतं जगदीदम् यस्मिन् सूत्रं वायुरसौ स्मृत:*** ಎಂದು ಬೃಹದ್ಭಾಷ್ಯ, ***स: सूत्रात्मा समुदीष्टो वायुर्लोकप्रणायक:*** ಎಂದು ಭಾಗವತತಾತ್ಪರ್ಯವು, [2]***विपूर्वात् श्वसितेर्ड:*** ಪ್ರತ್ಯಯದಿಂದ ವಿಶ್ವನೆಂದು ಶ್ವಾಸಕ್ಕೆ ನಿಯಾಮಕನು, ***धाय: पति:*** ಎಂದು ಇರುವುದರಿಂದ ಪ್ರಾಣಪತಿಯು. [3]**विश्वो वायु:** ಎಂಬಂತೆ, ಆ ವಾಯುವೇ ಧಾರಕನು ರಕ್ಷಕನು ವಿಶ್ವಭರನೆಂದರ್ಥವು, ***विश्वंभरो वायु:*** ಎಂದು ವಚನ, [4]***विश्वं सरमं नारायणं आत्मनि धत्ते*** ರಮಾಸಹಿತನಾದ ನಾರಾಯಣನನ್ನು ಹೃದಯಲ್ಲಿ ಧರಿಸಿದವನು.

[5]ಹರ್ಯಾಜ್ಞೆಯಿಂದ ಜಗತ್ತಿನ ಭಾರವನ್ನು ಧರಿಸಿದವನು, ***तस्मै विश्वस्य भारं प्रतिदिशवां स्त्वाम्*** ಎಂದು ವಚನವು, [6]***विश्वधां नारायणं याति, गच्छति जानाति वा,*** ಜಗತ್ತಿನ ಧಾರಕನಾದನಾದ ಶ್ರೀಹರಿಯನ್ನು ಚೆನ್ನಾಗಿ ತಿಳಿದವನು, ಅವನನ್ನು ಕುರಿತು ಹೋಗುತ್ತಕ್ಕವನು, [7]ವಿಶ್ವರೂಪನಾದ ರುದ್ರಾದಿಗಳಿಂದ ವಿಶಿಷ್ಟನಾಗಿ ಧಾರಕನಾಗಿದ್ದಾನೆ. ***प्रसादार्थं बकस्यापि वायुनोक्त:श्वरूपिणा । शौवोद्विध इति प्रोको रुद्रादिनां श्वरूपिणाम्*** ಎಂದ ವಚನವು. [8]***श्वा वै वायु: श्वसनात्*** ಎಂಬ ವಚನದಂತೆ ಶುನಕರೂಪವನ್ನು ಧರಿಸಿದವನೆ, ***विश्वधा: य:*** ಎಂಬ ಪದವಿಭಾಗವನ್ನು ಮಾಡಬಹುದು. ***यथा लक्षणं पदं कर्तव्यम्*** ಎಂದು ಪತಂಜಲಭಾಷ್ಯ, ***तस्मादवग्रहोऽनवग्रहो वा*** ಎಂದು ಸ್ಕಂದಭಾಷ್ಯ. ಯಜ್ಞಾರೂಪನಾಗಿ ಈ ಜಗತ್ತನು ಧರಿಸಿದವನು. ***य: प्रकाशरूप:*** ಎಂದು ತಾತ್ಪರ್ಯವಚನ.

ಅಂತಹ ನೀನು, **माम्** ***आङ् एतेश्च ह्रस्वश्च***

ಪ್ರಾರಬ್ಧಕರ್ಮಕ್ಕನುಸಾರವಾಗಿ ಶ್ರೀಹರಿಯ ಅಜ್ಞೆಯಿಂದ ಫಲವನ್ನು ಕೊಡುತ್ತೀ ಎಂದು ನಿನ್ನಲ್ಲಿ **उप आ इहि** ರಕ್ಷಣೆಗೋಸ್ಕರವಾಗಿ ನಿನ್ನ ಸಮೀಪ ಬಂದಿದ್ದೇನೆ. **दस्यून्** ಕಾಮಕ್ರೋಧಾದಿ ಶತ್ರುಗಳನ್ನು, ಬಾಹ್ಯವಾದ ಆಧ್ಯಾತ್ಮದಿ ಶತ್ರುಗಳನ್ನು, ಶಾಸ್ತ್ರಗಳನ್ನು ಅನ್ಯಥಾ ಅರ್ಥೈಸುವ ಶತ್ರುಗಳನ್ನು ನಾವಿಬ್ಬರೂ **अभि हनाव** ನಾಶಿಪೋಣ. **उत** ಮತ್ತು **आपे:** ಶತ್ರುಗಳ ಹನನದ ಪ್ರಕಾರವನ್ನು **बोधय** ನಮಗೆ ತಿಳಿಸು **अर्वाङ्** ಪ್ರತ್ಯಕ್ಷವಾಗಿ, **प्रतीचीनः** ಪರೋಕ್ಷವಾಗಿ ನನನ್ನು **आ वृवस्व** ಆದರಿಸು. *सर्वं प्राणेनावृतम्, प्राणो वै वासः सुवासः, सोऽयं शरिरैः परिवृत्तः, आव्रत्ताः सर्वजीवाः हि यथैव कनका वटाः । आच्छाद्यन्ते वित्तवाद्भिः* ಎಂಬ ವಚನಗಳು.

मन्त्र ७

संहिता – **अभि प्रेहि दक्षिणतो भवा**
**मेऽधा वृत्राणि जङ्घनाव भूरि ।**
**जुहोमि ते धरुणं मध्वो अग्र**
**मुभा उपांशु प्रथमा पिबाव ।। ७ ।।**

पदपाठः – अभि । प्र । इहि । दक्षिणतः । भव । मे ।यअध ।
वृत्राणि । जङ्घनाव । भूरि । जुहोमि । ते । धरुणं ।
मध्वः । अग्रम् । उभौ । उपऽअंशु । प्रथमा।
पिबाव।।७।।

ಸಂಹಿತಾ – **ಅಭಿ ಪ್ರೇಹಿ ದಕ್ಷಿಣತೋ ಭವಾ**
**ಮೇಽಧಾ ವೃತ್ರಾಣಿ ಜಂಘನಾವ ಭೂರಿ ।**
**ಜುಹೋಮಿ ತೇ ಧರುಣಂ ಮಧ್ವೋ ಅಗ್ರೆ**
**ಮುಭಾ ಉಪಾಂಶು ಪ್ರಥಮಾ ಪಿಬಾವ ।।೭।।**

'**अध** ಅಕಾರವಾಚ್ಯ ಚತುರ್ಮುಖನ್ನು ಧರಿಸಿದ, ಮನ್ಯುನಾಮಕ ನರಸಿಂಹನೇ, **माम् दक्षिणतः** ನನ್ನ ದಕ್ಷಿಣಭಾಗದಲ್ಲಿ **अभि प्रेहि**

ಅಭಿಮುಖವಾಗಿ ನಿಲ್ಲು, ಮತ್ತು **भव** ಬಾ **अध अथ** ಆಮೇಲೆ, **ते** ನಿನ್ನ **मध्वः** ಮಧುಗಳಿಗೆ ಧಾರಣಶಕ್ತಿಪ್ರದನಾದ, ಮಧುರರಸೋಪೇತವಾದ ರಸವನ್ನು **अग्रम्** ಮೊದಲು, **जुहोमि** ಹೋಮಿಸುತ್ತೇನೆ, *हु दानादनयोः* ಎಂದು ಧಾತುವು, ಹೋಮಾನಂತರ **उभौ** ನಾವಿಬ್ಬರೂ, **उपांशु** ಏಕಾಂತದಲ್ಲಿ, **प्रथमा** ಮೊದಲು **पिबाम** ಕುಡಿಯೋಣ, ಆ ರಸವನ್ನು ಪಾನಮಾಡಿ **भूरि** ಬಹಳವಾದ **वृत्राणि** ಪಾಪಗಳನ್ನು ಶತ್ರುಗಳ ಸಮುದಾಯವನ್ನು **जङ्घनाव** ಪುನಃ ಪುನಃ ನಾಶಿಸೋಣ.

**हे मन्यो** [1]*मन्यन्ते मन्वते अस्मिन्* ಎಂಬಂತೆ ಶ್ರೀಹರಿಯಾಭಿವ್ಯಕ್ತಿಗೆ ಮುಖ್ಯಸ್ಥಾನನಾದ, [2]*मन्युः संक्रमः* ಎಂದು ಹೈಮಾನುಶಾಸನ, *सङ्क्रमः विधारकः सेतुः घटकः आश्रयः मध्यमः* ಎಂದೆಲ್ಲಾ ಶಬ್ದಗಳು ಒಂದೇ ಅರ್ಥವುಳ್ಳದ್ದು ಸಂಕ್ರಮ ಸಾಧನವು ಭೂಮಿಜಲಗಳಿಗೆ ಮಧ್ಯದಲ್ಲಿ ಆಗುತ್ತದೆ ಅದರಂತೆ, *मध्यमः प्राणः* ಎಂಬ ವಚನದಂತೆ ಶ್ರೀಹರಿಯು ಇವನಿಗೆ ಉತ್ತಮನು, ಬಾಕಿ ಎಲ್ಲಾ ಜೀವರು ಇವನಿಗೆ ಅಧಮರು, ಇವರಿಬ್ಬರ ಮಧ್ಯದಲ್ಲಿ ಇರುವವನೇ, [3]ದುರ್ಗಮವಾದ ಸಂಸಾರವೆಂಬ ಸಮುದ್ರವನ್ನು ದಾಟಿಸುವವನೇ, [4]ಶ್ರೀಹರಿಪ್ರಸಾದ ಸಂಪಾದನೆಗೆ ದ್ವಾರನಾದವನೇ, [5]ಸಕಲಸಜ್ಜೀವರಿಗೆ ತತ್ತ್ವೋಪದೇಶದಿಂದ ಶ್ರೇಷ್ಠನಾದ ಆಶಯನೇ, ಉಭಯಕಾಲಕ್ಕೂ ಆಶ್ರಯನೇ, *स मोक्षेऽपि वायुरेव हि सर्वदा* ಎಂದು ವಚನವು. [6]ಭಗವದಪರೋಕ್ಷಜ್ಞಾನ ಸಾಧನವಾದ ಜ್ಞಾನವನ್ನು ಕೊಡುವವನು, [7]ನಿರತಿಶಯವಾಗಿ ತಿಳಿಯುವವನೇ, **अभि प्रेहि** ನನ್ನ ಉದ್ಧಾರಕ್ಕೇ ಹರಿಯಲ್ಲಿ ನಿವೇದನವನ್ನು ಬುದ್ಧಿಯಿಂದ ಮಾಡು, ಒಳಗೂ ಹೊರಗೂ ನನಗೆ ಅಭಿಮುಖನಾಗಿರು.

**अध** ಆದ್ದರಿಂದ, **दक्षिणतः** ದಾನಾದಿ ಕರ್ಮಗಳಿಂದ ಅನುಕೂಲವಾದ ಉತ್ಸಾಹವುಳ್ಳ ವುಳ್ಳವನಾಗಿ **मे** ನನ್ನ, ಕ್ಷೇಮಕ್ಕೋಸ್ಕರವಾಗಿ **भव** ಆಗು **ते** *द्वितीयार्थे षष्ठी* ನಿನ್ನನ್ನು, **अग्रम्** [1]ಸ್ವಪ್ರಸಾದದಿಂದ ನಿನ್ನ ಅಂಗರಾದ ಭಗವದ್ಭಕ್ತರಿಗೆ ಅಜ್ಞಾನಾದಿಗಳನ್ನು ನಾಶಿಸುವವ, [2]ವರ್ಣಾಶ್ರಮಾಚಾರಗಳಿಂದ ಶುದ್ಧರಾದವರಿಗೆ ಶ್ರೇಷ್ಠತತ್ವಜ್ಞಾನವನ್ನು ಕೊಡುವ, **धरुणम्** [1]ವಂಶದಂತೆ ಸಕಲಧಾರಕನಾದ, *प्राणो वंश इति स्थविरः शाकल्यः* ಎಂದು ವಚನವಿದೆ, *तथेन्द्रियाभिमानि देवनां वायुराश्रयः* ಎಂದು ಭಾಷ್ಯವಚನವಿದೆ. **धारुणः**

***मध्व:, पृथिव्या: धारणो मध्व:, ग्रहस्याच्छादनादिनां मध्यवंशो यथाश्रय:*** ಎಂದು ವಚನದಂತೆ ಎಲ್ಲಾ ಜಗತ್ತಿಗೂ ಆಶ್ರಯನು, [2]ಪ್ರತಿಷ್ಠನು, ***प्रतिष्ठा वै धारणम्*** ಎಂದು ಶತಪಥ ಬ್ರಾಹ್ಮಣ, ***प्रतिष्ठा प्रतिमा*** ಎಂದು ಶ್ರೀಮಧ್ವಾಚಾರ್ಯರು ವ್ಯಾಖ್ಯಾಸಿದ್ದಾರೆ. ***वृष्णो: विशिष्टा प्रतिमा वायुरेव*** ಎಂದು ಭಾಷ್ಯವಚನ, [3]***मिथ्यात्वाख्याशत उद्धारात् साधूनां गुरुत्वेनोद्धारकत्वात् धरुणो धारणशील:*** ಎಂದು ಸುರೋತ್ತಮತೀರ್ಥರ ವ್ಯಾಖ್ಯಾನದಂತೆ ಗುರುತ್ವೇನ ಉಪದೇಶಕನಾಗಿ ಧರಿಸುವವ.

[4]***स्थित एव हि मुख्यप्राण: इदं धत्ते धारयति*** ಎಂಬ ಪೌತ್ರಾಯಣಶ್ರುತಿಯಂತೆ ಎಲ್ಲಾ ಪದಾರ್ಥಗಳಲ್ಲಿದ್ದು ಧರಿಸುವ, [5]***धरुणमुदकम्*** ಎಂಬಂತೆ ಸಕಲಪ್ರಾಣಿಗಳಿಗೂ ಪ್ರಾಣಭೂತನಾದವ. ***प्राणिनां प्राणभूत:*** ಎಂದು ವಚನ. [6]ಪಕ್ಷೀಶನಾದ ಗರುಡನನ್ನು ನಿಯಮಿಸುವವ, ***धरुणो गरुड: वैनतेय: स च प्राण:, प्राणो वै सुपर्णं प्राणो वै पतङ्ग:*** ಎಂದು ಜೈಮಿನಿಯೋಪನಿಷತ್ ಬ್ರಾಹ್ಮಣದಲ್ಲಿರುವುದರಿಂದ ಗರುಡೇಶನು, [7]ಅನಂತವೇದೋತ್ಥನ್ನ ಜ್ಞಾನರತ್ನಗಳಿಗೆ ಧಾರಕನು, [8]***धरुण आयुक्त:*** ಎಂದು ಆನಂದಸಾಗರನು ಹೇಳಿರುವುದರಿಂದ ಶ್ರೀಹರಿಯ ಮುಖ್ಯಸಚಿವನು, [9]***धरुण: गोवत्स:, स चेह शिशुर्वायुरेव, वायुर्गोवत्सरूपेण सर्वप्राणिषुसंस्थित:*** ಎಂಬ ವಚನದಂತೆ ಗೋವತ್ಸನಾದ **मध्व:** ***मध्वम्*** ವಿಭಕ್ತಿಯ ಪರಿಣಾಮವಾಗಿದೆ ಮಧ್ವಾಚಾರ್ಯರನ್ನು, ***मध्वो वो नाम मारुततं यजत्रा*** ಎಂದು ಶ್ರುತಿಯಲ್ಲಿ ಪ್ರಸಿದ್ಧವಾದ ಶಬ್ದವನ್ನೇ ಗ್ರಹಿಸಲಾಗಿದೆ.

ಅಂತಹ ಮಧ್ವಾಚಾರ್ಯರನ್ನು **उपांशु** ಏಕಾಂತದಲ್ಲಿ, **प्रथमा** ಅತ್ಯಂತಶ್ರೇಷ್ಠತಮವಾದ, ಅಮೃತಮಯವಾದ ಉಪದೇಶಾಮೃತವನ್ನು **उभौ** ಸೇವ್ಯಸೇವಕರಾದ **आवाम्** ನಾವಿಬ್ಬರೂ, **पिबाव** ಹರಿಯ ಪ್ರೀತಿಗೋಸ್ಕರವಾಗಿ, ಮುಕ್ತಿಸಾಧನಕೋಸ್ಕರವಾಗಿ ಸೇವಿಸುತ್ತೇವೆ, **अध** ಆಮೇಲೆ ಇದರ ದ್ವಾರಾ **भूरि** ಬಹಳವಾದ **वृत्राणि** ಶತ್ರುಗಳನ್ನು ಈ ಜನ್ಮದಲ್ಲಿ ಜನ್ಮಾಂತರದಲ್ಲಿ ತ್ರಿಕರಣಗಳಿಂದ ಜನ್ಮವಾದ ಪಾಪಗಳನ್ನು **जङ्घनाव** ನಿನ್ನ ಪ್ರಸಾದದಿಂದ ನಾಶಿಸುವವರಾಗೋಣ, ಇದರಿಂದ ಶುದ್ಧನಾದ ನಾನು **जुहोमि** ಈ ರೀತಿಯಲ್ಲಿ ನನಗೆ ಮುಕ್ತಿಯ ಮಾರ್ಗವನ್ನು ಪ್ರದರ್ಶಿಸಿ ನಿನಗೆ ನಿನ್ನ ಅಂತಃಕರಣ ನಿಯಾಮಕನಾದ ಹರಿಗೆ ಅರ್ಪಿಸುತ್ತೇನೆ, ನಿನ್ನ ಉಪದೇಶಾಮೃತಪಾನದಿಂದ

ನಾವು ಶುದ್ಧರಾಗಿ ಶಿಷ್ಯರ ಸಂತತಿಯನ್ನು ನಿರ್ಮಾಣಮಾಡಿ ಕೃತಾರ್ಥರಾಗಿ ಭಜಿಸುತ್ತೇವೆ.

**मन्त्र ८**

संहिता – **त्वया मन्यो सरथमारुजन्तो**
**हर्षमाणासो धृषिता मरुत्वः ।**
**तिग्मेषव आयुधा संशिशाना**
**अभि प्र यन्तु नरो अग्निरूपाः ।। ८ ।।**

पदपाठः – त्वया । मन्यो इति । सऽरथम् । आऽरुजन्तः।
हर्षमाणासः। धृषिताः । मरुत्वः । तिग्म ऽ इषवः।
आयुधा । संऽशिशानाः । अभि । प्र । यन्तु । नरः।
अग्निऽरूपाः ।। ८ ।।

ಸಂಹಿತಾ – **ತ್ವಯಾ ಮನ್ಯೋ ಸರಥಮಾರು ಜಂತೋ**
**ಹರ್ಷಮಾಣಾಸೋ ಧೃಷಿತಾ ಮರುತ್ವಃ ।**
**ತಿಗ್ಮೇಷವ ಆಯುಧಾ ಸಂಶಿಶಾನಾ**
**ಅಭಿ ಪ್ರಯಂತು ನರೋ ಅಗ್ನಿರೂಪಾಃ ।।೮।।**

'हे **मरुत्वः** *मरुतः नियम्यत्वेनाय सन्तीति मरुत्वः, वत्वं रुः सम्बुद्धौ* ಎಂಬ ಸೂತ್ರದಿಂದ ಮರುದ್ಗಣಗಳನ್ನು ನಿಯಮ್ಯವಾಗಿವುಳ್ಳನೇ, **मन्यो** ಮನ್ಯುನಾಮಕನಾದ ಶ್ರೀನರಸಿಂಹನೇ, **त्वया** ನಿನ್ನಿಂದ ಸಹಿತನಾಗಿ **सरथं** ಸಮಾನವಾದ ರಥವನ್ನು, **आरुहन्तः** ಹತ್ತತಕ್ಕಂತಹ, ಅಥವಾ ರಥಸಹಿತನಾದ ಶತ್ರುಗಳನ್ನು ಸಂಹರಿತಕ್ಕಂತಹ, **हर्षमाणासः** ಸಂತುಷ್ಟರಾದ, **धृषिताः** ಬಲಿಷ್ಠರಾದ, **मरुत्वः** ವಾಯುವೇಗವುಳ್ಳವರಾದ, **तिग्मेषवः** ತೀಕ್ಷ್ಣವಾದ ಬಾಣಗಳುಳ್ಳ, **आयुधा** ಆಯುಧಗಳನ್ನು, **संशिशानाः** ತೀಕ್ಷ್ಣವಾಗಿಮಾಡುವ, **नरः** ಯುದ್ಧದಲ್ಲಿ ಮುಂದೆ ಸಾಗುವ ಸೈನಿಕರು, **अग्निरूपाः** ಅಗ್ನಿಯಂತೆ ಸುಡುವವರಾಗಿ, **अभि प्रयन्तु** ನನ್ನ ರಕ್ಷಣೆಗೆ ಎಲ್ಲಾ

ಕಡೆಯಿಂದಲೂ ಬರುವವರಾಗಲೀ.

[1]*मनतेर्गर्वार्थायुच्* ಎಂಬಂತೆ [1]ನಿಸ್ಸೀಮಗುಣಯುಕ್ತನಾದರೂ ಸ್ವಭಾವದುಷ್ಟರಾದ ದೈತ್ಯರನ್ನು ಮೋಹಿಸಲು ತನ್ನ ಪ್ರಭಾವದಿಂದ ಗರ್ವಿಗಳಂತೆ ದುಃಖಿಗಳಂತೆ ತೋರಿಸುವವನೇ, ***ब्रह्मा अमूढो मूढवत् इति वदुच्यते*** ಎಂದು ತಾತ್ಪರ್ಯವಚನವು ***दुःखीव दृश्यते ब्रह्मा तद्वास्तवं न जानीयाद्धरिप्रीत्यर्थमेव च*** ಎಂದು ಗರುಡಪುರಾಣ. [2]ದೃಢನಾದವನೇ, [3]ನಿಷ್ಕಂಪವಾದ ಪ್ರವೃತ್ತಿಯುಳ್ಳವನೇ, ***मन् धातुः ज्ञानस्तुतिप्रसादनक्रोध-स्पर्धाचिन्तनसत्कारादरपूजोपदेशाङ्गीकारस्पृहाभिप्रायगणननिरूपण-तर्कणासु*** ಎಂಬ ಧಾತುಕೋಶದಂತೆ ಅನೇಕಾರ್ಥಗಳನ್ನು ತಿಳಿಯುವುದು.

ಅಂತಹ ಮುಖ್ಯಪ್ರಾಣನೇ, **त्वया** ನಿನ್ನ ಸಹಿತವಾಗಿ **सरथं** ರಮಣಸಾಧನೆಗಳಿಂದ ಸಹಿತನಾಗಿ, ಸಮಾನವಾದ ರಥವನ್ನು ಆರೋಹಿಸಿ, ***अथ देवरथस्तस्या वाग्बुद्धिः श्रोत्रे पक्षसि, चक्षुषी युक्ते, मनः सङ्गृहीता तदयं प्राणोधितिष्ठति*** ಎಂದು ಐತರೇಯದಲ್ಲಿದೆ, ***सर्तेरथप्रव्ययान्तं रूपम्*** ನಮ್ಮನು ಬಾಡಿಸಲಿಕ್ಕೆ ಬರತಕ್ಕಂತಹ ಶತ್ರುಗಳ ಸಮುದಾಯನ್ನು, **आरुजन्तः** ನಿರಾಕರಿಸುವುದಕ್ಕೆ ಹೋಗುವಂತಹ, **हर्षमाणासः** ನಿನ್ನಾಶಯದಿಂದ ಮನೋವೈಕಲ್ಯರಹಿತರಾದ, **धृषिताः** ಪರರನ್ನು ನಿಗ್ರಹಿಸತಕ್ಕ ಸಾಮರ್ಥ್ಯೋಪೇತರಾದ, **मरुत्वः** [1]ಮರುದ್ಗಣದಲ್ಲಿ ಶ್ರೇಷ್ಠನಾದವನೇ, [2]***मरुत्भारतः*** ಎಂದು ಯಾಸ್ಕವಚನದಂತೆ ***भरत एव भारतः*** ಎಂಬಂತೆ ವಾಯುದೇವರೇ [3]***मरुत्बलम्*** ಎಂಬಂತೆ ಮಹಾಬಲಿಷ್ಠನಾದ, ಮಹಾವೈಷ್ಣವ ಸೇನಾನಾಯಕನಾದ ಮುಖ್ಯಪ್ರಾಣದೇವರೇ, **तिग्मेषवः** ನೀನೇ ನಾಯಕನಾದ್ದರಿಂದ ನಮ್ಮ ಸೈನಿಕರು ತೀಕ್ಷ್ಣಾಯುಧರಾಗಿ, **आयुधाः** ಪರಪಕ್ಷನಿರಾಕರಣ ಸಮರ್ಥ ಜ್ಞಾನ ವಿಚಾರವೆಂಬ ಬಾಣ, ಕೊಡಲಿಗಳೆಂಬ ಆಯುಧಗಳನ್ನು, **संशिशानाः** ಅವನ್ನು ತೀಕ್ಷ್ಣೀಕರಿಸುವ, ನಿನ್ನನುಗ್ರಹವುಳ್ಳ ನಮ್ಮನ್ನು, **नरः** ***वायुना हि सर्वे लोकाः नेनीयन्ते*** ಎಂಬ ವಚನದಂತೆ ಎಲ್ಲರನ್ನೂ ಕರೆದುಕೊಂಡು ಹೋಗುವ ಮುಖ್ಯಪ್ರಾಣದೇವರು, ಮುಖ್ಯಪ್ರಾಣಾಂಶನಾದ ನರನು. ***विश्वेभिः नामभिः नरो हवींषि*** ಎಂಬ ಶೃತಿಯಲ್ಲಿ ನಿರೂಪಿತವಾಗಿದೆ. ಮುಖ್ಯಪ್ರಾಣದೇವರು ಒಬ್ಬರೇ ಇದ್ದರೂ

ಬಹಳರೂಪಗಳಿರುವುದರಿಂದ, ಅಥವಾ ಪೂಜ್ಯರು ಎಂಬಾರ್ಥದಲ್ಲಿ ಬಹುವಚನವಿದೆ, ಅಥವಾ ಆ ಆಯುಧಗಳನ್ನು ಧರಿಸಿದ ವೀರರು, ಹರಿಗುರುಭಕ್ತರಾದ ಜ್ಞಾನಿಗಳು, **अग्निरूपाः** ಸರ್ವಾಗ್ರಗಣ್ಯನಾದ ಶ್ರೀಹರಿಯನ್ನು ಪ್ರಕಾಶಿಸುತ್ತಾ, ಅಗ್ನಿಗೆ ಸಮಸಂಖ್ಯಾತರೂಪವುಳ್ಳಂತಹ, ಹನುಮ, ಭೀಮ, ಮಧ್ವರೆಂಬ ಮೂರು, ಪ್ರಾಣಾದಿಪಂಚಕರೂಪವುಳ್ಳ, *ते वा एते प्राणाः एव यदग्नयः* ಎಂದು ಶತಪಥಬ್ರಾಹ್ಮಣ. **अभि प्रयन्तु** ದುಷ್ಟರನು ನಿರಾಕರಿಸಿಲಿಕ್ಕೆ ನಿಶ್ಚಯಿಸಲಿ.

**मन्त्र १**

संहिता –

**अ॒ग्निरि॑व मन्यो त्वि॒षि॒तः स॑हस्व**
**से॒ना॒नीर्नः॑ सहुरे हू॒त ए॑धि ।**
**ह॒त्वाय॒ शत्रू॒न् वि भ॑जस्व॒ वेद॒**
**ओजो॒ मिमा॑नो॒ वि मृधो॑ नुदस्व ॥ १ ॥**

पदपाठः –

अ॒ग्निः ऽ इ॑व । म॒न्यो॒ इति॑ । त्वि॒षि॒तः । स॒ह॒स्व॒ । से॒ना॒नीः । न॒ः । स॒हु॒रे॒ । हू॒तः । ए॒धि । ह॒त्वाय॑ । शत्रू॑न्। वि । भ॒ज॒स्व॒ । वेदः॑ । ओजः॑ । मिमा॑नः । वि । मृधः॑ । नु॒द॒स्व॒ ॥ १ ॥

ಸಂಹಿತಾ –

**ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ**
**ಸೇನಾನೀರ್ನಃ ಸಹುರೇ ಹೂತ ಏಧಿ ।**
**ಹತ್ವಾಯ ಶತ್ರೂನ್ ವಿಭಜಸ್ವ ವೇದ**
**ಓಜೋ ಮಿಮಾನೋ ವಿ ಮೃಧೋ ನುದಸ್ವ ॥೧॥**

'हे **सहुरे** ಭಕ್ತಾಪರಾಧಗಳನ್ನು ಸಹಿಸುವುದಕ್ಕೆ ಸಮರ್ಥನಾದ, ಶತ್ರುಗಳನ್ನು ನಿಗ್ರಹಸಿಲಿಕ್ಕೆ ಹುರ್ ಎಂದು ಶಬ್ದಮಾಡುವ **मन्यो** ಮನ್ಯುನಾಮಕನಾದ ಶ್ರೀಹರಿಯೇ, **अग्निः इव** ಅಗ್ನಿಯಂತೆ, **त्विषितः** ಪ್ರಕಾಶಮಾನನಾಗಿ, **सेनानिः** ಸೇನಾನಾಯಕನಾದ, ನೀನು, **हूतः** ಯುದ್ಧಕ್ಕೆ

ಆಹ್ವಾನಿಸಿಲ್ಪಟ್ಟವನಾಗಿ, **नः** ನಮ್ಮಗಳ, **शत्रून्** ಶತ್ರುಗಳನ್ನು **मृधः** ಯುದ್ಧಕ್ಕೆ ಬಂದವನಾಗಿ, **सहस्व** ನಾಶಗೊಳಿಸು ಪರಾಭವಗೊಳಿಸು.

ಅದಕ್ಕೋಸ್ಕರವಾಗಿ **एधि** ಅಭಿವೃದ್ಧನಾಗು **शत्रून्** ಶತ್ರುಗಳನ್ನ, **हत्वाय** ಕೊಂದು, **वेदः** ಧನವನ್ನು, **विभजस्व** ಹೊಂದಿಸು **नः** ನಮ್ಮನ್ನು, **ओजः** ಬಲಿಷ್ಠರಾಗಿ, **मिमानः** ಮಾಡತಕ್ಕವನಾಗಿ, **शत्रून्** ಶತ್ರುಗಳನ್ನು **वि नुदस्व** ನಮಗೆ ಹಿಮ್ಮುಖನಾಗುವಂತೆ ಮಾಡು.

[?]ಹೇ **सहुरे** [1]***सहति साहयति च*** ಎಂಬಂತೆ ಪರಕೀಯರ ಅಜ್ಞಾನಾದಿಗಳನ್ನು ಅಥವಾ ಜಗತ್ತಿನ ಭಾರವನ್ನು ಅಥವಾ ಎಲ್ಲವನ್ನೂ ಅಪಹರಿಸಲು ಅಥವಾ ಸಹಿಸಲು ಸಮರ್ಥನಾದ, [2]***सप्तस्कन्धगतो लोकान् यो विभर्ति महाबलः*** ಎಂಬ ಹರಿವಂಶ ವಚನದಂತೆ ಪಾತಾಳಾದಿ ಸಪ್ತಲೋಕಗಳನ್ನು ಶೇಷಸಹಿತನಾಗಿ ಕೂರ್ಮರೂಪದಿಂದ ಈ ಚತುರ್ದಶಲೋಕಾತ್ಮಕವಾದ ಜಗತ್ತಿನ ಭಾರವನ್ನು ಧರಿಸದವನೇ, [3]***सह्यन्ते निराक्रियन्तेऽरातयो यस्मिन्*** ಎಂಬ ವಿಗ್ರಹದಂತೆ ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹಿಸುವ ಸಾಮರ್ಥ್ಯವುಳ್ಳಂತಹ, [4]ಜ್ಞಾನಾಜ್ಞಾನಮಯವಾದ ಪ್ರಮಾಣತದಾಭಾಸರೂಪವಾದ ವಾಕ್ಯಾರ್ಥ ಸಮರದಲ್ಲಿ ಪರವಾದಿಗಳನ್ನು ನಿಗ್ರಹಿಸುವ ಸಮರ್ಥ್ಯವುಳ್ಳವನೇ, [5]**सहुरि** ಎಂಬ ಅಪ್ರಸಿದ್ಧಶಬ್ದವಾದ್ದರಿಂದ ಪ್ರಸಿದ್ಧ ಮಧ್ವಶಬ್ದವಾಚ್ಯನೇ, ***अप्रसिद्धः प्रसिद्धश्च सङ्गच्छेते यदिकचित्। तत्राप्रसिद्धं निर्ब्रूयात्प्रसिद्धमिति स्थितिः*** ಎಂದು ವೇಂಕಟಮಾಧವರು ವ್ಯಾಖ್ಯಾನಿಸಿದ್ದಾರೆ.

ಹೇ **मन्यो** ಎಲೈ ಮುಖ್ಯಪ್ರಾಣದೇವರೇ, **नः** ನಮ್ಮಗಳ, **सेनानीः** ***एकमर्थमुद्दिश्य जयाख्ययेमेतीति सेना*** ಎಂದು ದುರ್ಗಾದಾಸನ ವ್ಯಾಖ್ಯಾನ. ಅಂತಹ ಸೇನೆಯನ್ನು ನಿಯಮಿಸುವವನಾದ, ರಾಮಕೃಷ್ಣವ್ಯಾಸರ, ಸೀತೆಗೋಸ್ಕರವಾಗಿ ಹನುಮ ಭೀಮ ಮಧ್ವ ರೂಪನಾದ ಕುರುಪಾಂಡವರ ಸೇನಾನಾಯಕ, **अग्निर्वै देवानां सेनानिः** ಎಂಬ ಶೃತಿಯನ್ನು, ***अयं प्राणाग्निर्मन्युरेव अग्निः वायुः भीमसेनः*** ಎಂದು ಸುರೋತ್ತಮರು ವ್ಯಾಖ್ಯಾಸಿದ್ದಾರೆ. ನೀನು **हूतः** ಆಹೂತನಾಗಿ ನಮ್ಮ ಸಮೀಪಕ್ಕೆ ಬರಲು **एधि** ಸನ್ನದ್ಧನಾಗು ಆಹುತಿಗಳಿಂದ, ಪೂಜೆಗಳಿಂದ ಸ್ತುತಿಸಿಲ್ಪಟ್ಟ ದೇವತೆಗಳು ವೀರ್ಯದಿಂದ ಅಭಿವೃದ್ಧರಾಗುತ್ತಾರೆ.

**अग्निः इव** इव ಶಬ್ದಕ್ಕೆ एव ಎಂದರ್ಥ, [1]*अयं वाऽग्निः प्रजाश्च प्रजापतिश्च, आत्मा वा अग्निः, ब्रह्मा ह्यग्निः* ಎಂದು ಶತಪಥಬ್ರಾಹ್ಮಣ. *आत्माविरिञ्चः* ಎಂದು ಬೃಹದ್ಭಾಷ್ಯವಚನ, *यो वा अग्निः स पवमानः* ಎಂದ ಐತರೇಯವಚನ, *वायुरग्निरिति प्रोक्तः* ಎಂದ ಬೃಹದ್ಭಾಷ್ಯವಚನ, *अग्निः वै नभस्पतिः वायुः वै नभस्पतिः* ಎಂದು ಗೋಪಥಬ್ರಾಹ್ಮಣ. [2]*अग्निः* ಗಮನಾಗಮನಾದಿ ಶಕ್ತಿಶೂನ್ಯವಾದ ಜಗತ್ತಿನ ಮುಂದೆ ನಿಂತು ನಿಯಮಿಸಿತಕ್ಕವನು ಪ್ರವರ್ತಿಸುವವನು. *प्राणाग्नय एव एतस्मिन्पुरे जग्रति* ಎಂದು ಷಟ್‌ಪ್ರಶ್ನವಚನ. *प्राणो अमृतं तद् हि अग्ने रूपम्* ಎಂದು ಶತಪಥಬ್ರಾಹ್ಮಣ, *एष हि देवेभ्यो हव्यं भरति तस्माद् भरतोऽग्निरित्याहुरेष उ एव प्रजाः प्राणो भूत्वा बिभर्ति तस्मादेवाह भरतेति* ಎಂದು ಬ್ರಾಹ್ಮಣ ವಾಕ್ಯಕ್ಕನುಸಾರವಾಗಿ **भरत** ಎಂದರೆ ಅಗ್ನಿಯು ವಾಯುವು, *वाग्वा अग्निः* ಎಂಬ ಶೃತಿಯಂತೆ ಅಗ್ನಿಯು ವಾಯುವಾದ್ದರಿಂದ, ಅವನಿಗೆ ಅರ್ಧಾಂಗಿಯಾದ ವಾಗಭಿಮಾನಿಯು ಅಗ್ನಿಯಾಗುತ್ತಾಳೆ. *अर्धनारीवपुः* ಎಂದು ಶ್ರೀಮಧ್ವರ ವಾಣಿ, [3]*अग्निः दहनशीलः* ಎಂಬಂತೆ ಶ್ರೀಮಧ್ವರೂಪದಿಂದ ವಾಯುದೇವರು ಜೈನತಾರ್ಕಿಕಮೀಮಾಂಸಕಾದಿಗಳ ಪರಮಹೇಯವಾದ ವಾದಗಳನ್ನು ಭಸ್ಮೀಕರಿಸಿದರಾದ್ದರಿಂದ ಅವರು ಅಗ್ನಿಯು, **त्विषतः** ಅಗ್ನಿಯಿಂದ ಸಂಸ್ಕೃತವಾದ **आयुधा** ಶಂಖಚಕ್ರಮೊದಲಾದಾಯುಧಗಳನ್ನು **संशिशानाः** ಸ್ವಯಂಧರಿಸಿ, ತನ್ನ ಶಿಷ್ಯವರ್ಗಕ್ಕೆ ಕೊಡುವವನು. ತಪ್ತಮುದ್ರಾಪದಾತಾ ಎಂದರ್ಥ *शिशीति दानकर्म* ಎಂದು ನಿರುಕ್ತವಚನ.

**त्विषतः** ತಪ್ತವಾದ **आयुधा** ಆಯುಧಗಳಿಂದ **संशिशानाः** ಸಂಸ್ಕೃತನಾದವನು ಅಥವಾ **अग्निः** ನಾರಾಯಣನು, **त्विषतः इव** ಅಗ್ನಿಯಂತೆ ಪ್ರಭೆಯುಳ್ಳವನು ಇಂತಹ ವಾಯುವು, **शत्रून्** ವೈರಿಗಳ, **ओजः** ಸಾಮರ್ಥ್ಯವನ್ನು, **मिमानः** ನಿವಾರಿಸತಕ್ಕವನಾಗಿ, **हत्वाय** ಅವರನ್ನು ನಿಸ್ತೇಜಸ್ವಿಗಳನ್ನಾಗಿ ಮಾಡಿ, ಅಥವಾ ಅವರ ಸಂಹಾರಕ್ಕೋಸ್ಕರವಾಗಿ **सहस्व** ಅವರನ್ನು ನಿರಾಕರಿಸಲಿಕ್ಕೇ ನಮ್ಮ ಸಮ್ಮುಖನಾಗು. ನಮ್ಮ ಪಕ್ಷದಲ್ಲಿರುವವನಾಗು.

**वि भजस्व** ಇವರು ಯೋಗ್ಯರು, ಇವರು ಅಯೋಗ್ಯರು ಎಂದು ವಿವೇಚನೆಯನ್ನು ಮಾಡು. *वायुर्वै विवनक्तुः अयं वै वायुर्योऽयं पवते एष वा इदम् सर्वं विवनक्ति यदिदं किंच विविज्यते* ಎಂದು ವಚನವಿದೆ.

ಋಗ್ಭಾಷ್ಯದಲ್ಲಿಯೂ ಈ ಮಾತಿದೆ, *शोधकाय प्रधानाय वो बलाय च वायवे । शुद्धाय वा सुप्रकाशाज्ञानायातिबलाय च* ಆ ವೈರಿಗಳು ನಮ್ಮ ಸೇವೇಯನ್ನು ಮಾಡುವಂತೆ ಪ್ರೇರಿಸು **नः** ನಿನ್ನನ್ನು ಸೇವಿಸುವ ನಮ್ಮಗಳನ್ನು, **हे ओजः** ಪ್ರಕಾಶನಾದ ಯುಕ್ತಿಜ್ಞಾನಥಲವುಳ್ಳ ಮುಖ್ಯಪ್ರಾಣನೇ **वेद** ನೀನು ತಿಳಿದಿದ್ದ ಅಥವ ಹೆ **वेद** ಸರ್ವಜ್ಞನನೇ. *वेदयतीति वेदः* ಎಲ್ಲವನ್ನು ತಿಳಿಸುವವನೇ, ಇಂತಹ ಪ್ರಾಣನೇ, **विमृधः** ನಾನಾಪ್ರಕಾರವಾದ ಯುದ್ಧಸ್ಥಾನದ ದೆಸೆಯಿಂದ, ನಮ್ಮ ಜ್ಞಾನವನ್ನು ಅಪಹರಿಸುವ ಯುದ್ಧದ ದೆಸೆಯಿಂದ, ಅಪಾರವಾದ ಕಾರುಣ್ಯವೆಂಬ ಅಮೃತರಸ ಯುಕ್ತವಾದ ಮೃಧುಮನಸ್ಸುಳ್ಳ ನೀನು *मृधिरुन्दने क्लेदनार्थः* ಅಂತಹ ಅಸೂಯೇರ್ಷಾದಿಮನೋದೋಷಗಳಿಂದ ನಮ್ಮನ್ನು, **नुदस्व** ಪರಿಹರಿಸು.

मन्त्र १०

संहिता – **सहस्व मन्यो अभिमातिमस्मे**
**रुजन् मृणन् प्रमृणन् प्रेहि शत्रून् ।**
**उग्रं ते पाजो नन्वा रुरुध्रे**
**वशी वशं नयस एकज त्वम् ॥ १० ॥**

पदपाठः – सहस्व । मन्यो इति । अभिऽमातिम् । अस्मे इति । रुजन् । मृणन् । प्रऽमृणन् । प्र । इहि । शत्रून् । उग्रम् । ते । पाजः । ननु । आ । रुरुध्रे । वशी । वशम् । नयीसे । एकऽज । त्वम् ॥ १० ॥

ಸಂಹಿತಾ– ಸಹಸ್ವ ಮನ್ಯೋ ಅಭಿಮಾತಿಮಸ್ಮೇ
ರುಜನ್ ಮೃಣನ್ ಪ್ರಮೃಣನ್ ಪ್ರೇಹಿ ಶತ್ರೂನ್ ।
ಉಗ್ರಂ ತೇ ಪಾಜೋ ನನ್ವಾ ರುರುಧ್ರೇ
ವಶೀ ವಶಂ ನಯಸ ಏಕಜತ್ವಮ್ ॥೧೦॥

[1]ಹೆ **मन्यो** ಮನ್ಯುನಾಮಕನಾದ ನರಸಿಂಹನೇ, **एकज** [1]ತಂದೆತಾಯಿಯರ ಅಪೇಕ್ಷೆಯಿಲ್ಲದೆ ಅಭಿವ್ಯಕ್ತನಾಗುವವನೇ, [2]ಮೂಲರೂಪ

ಅವತಾರ ರೂಪಗಳಿಗೆ ಭೇದರಹಿತನಾದವನಾಗಿ [illegible]ದಿಂದ ಅಭಿವ್ಯಕ್ತನಾಗುವವನೇ, **वशी** [1]ಸಮಸ್ತಜಗತನ್ನು ನಿನ್ನಾಧೀನದಲ್ಲಿ ಇಟ್ಟುಕೊಂಡಿರುವವನೆ, [2]ಭಕ್ತಾಧೀನನಾದವನೇ, **त्वम्** ನೀನು **शत्रून्** ನಮನ್ನು ಹಾಗೂ ಶತ್ರುಗಳನ್ನು (ಎಲ್ಲವನು) **वशम्** ಅಧೀನವಾಗಿ, **नयसे** ಮಾಡುಕೊಳ್ಳುತ್ತೀಯೇ.

ಅದ್ದರಿಂದ, **ते** ನಿನ್ನ, **उग्रम्** ಅತ್ಯಂತತೀಕ್ಷ್ಣವಾದ, **पाजम्** ಬಲವನ್ನು, **जनाः** ಜನರುಗಳು, **आ रुरुध्रे ननु** ತಿರಸ್ಕರಿಸುವವರು ಯಾರು, ಯಾರು ತಿರಸ್ಕರಿಸಲು ಸಾಧ್ಯವಿಲ್ಲ, ಅದ್ದರಿಂದ **त्वम्** ನೀನು, **अस्मे** ನಮಗೋಸ್ಕರವಾಗಿ, **शत्रून्** ಶತ್ರುಗಳನ್ನು, **प्रमृणन्** ಹಿಂಸಿಸತಕ್ಕವನಾಗಿ, ಅವರು ಪುನಃ ಜೀವಿಸಬಾರದು ಆ ಪ್ರಕಾರವಾಗಿ **प्र इहि** ಮಾಡು, **अभिमनिम्** ನಮಗೆ ತೊಂದರೆಯನ್ನು ಕೊಡುವ ಶತ್ರುವನ್ನು, **रुजन्** ರೋಗಯುಕ್ತವಾಗಿ ಮಾಡಿ, **सहस्व** ಅವನನ್ನು ತಿರಸ್ಕರಿಸು.

**हे मन्यो** [1]ಸಕಲಶಾಸ್ತ್ರಗಳನ್ನು ವಿಚಾರಮಾಡತಕ್ಕವನೇ, [2]*त्वदुक्तं मन्यते क्षमते* ಎಂದು ತಿಳಿಸಿದಂತೆ ಶರೀರಾಭಿಮಾನರಹಿತನಾದ್ದರಿಂದ ಸರ್ವವನ್ನು ಸಹಿಸುವವನೇ, *आशरीरो वायुः* ಎಂದು ವಚನ *ब्रह्म निरभिमानित्वात्* ತಾತ್ಪರ್ಯವಚನ, [3]ಕ್ಷಮೆಯಿಂದ ಭಕ್ತರುಗಳನ್ನು ಅನುಗ್ರಹಿಸುವವನೇ, **एकज** [1]*एकोऽसहायः* ಎಂಬಂತೆ ಕರ್ಮದ ಸಹಾಯವಿಲ್ಲದೆ ಅವತರಿಸುವವನೇ, [2]*एकः हरिः तस्माज्जायते* ಎಂಬಂತೆ ಶ್ರೀಹರಿಯ ಅಜ್ಞೆಮಾತ್ರದಿಂದಲೇ ಹುಟ್ಟುವವನೇ, [2]ಸರ್ವದಾ ಏಕಪ್ರಕಾರವಾಗಿ ಅವತರಿಸುವವನೇ, [3]ಮೂಲರೂಪ ಅವತರರೂಪಗಳಿಗೆ ಸಾಮರ್ಥ್ಯದಲ್ಲಿ ವ್ಯತ್ಯಾಸವಿಲ್ಲದವನೇ, [4]**एकं जं यस्य सः** ಎಂದು ವಿಗ್ರಹಿಸಿದಾಗ ಮೋಕ್ಷಕ್ಕೇ ಒಂದೇ ಜನ್ಮವುಳ್ಳವನೇ, [5]*जि अभिभवे* ಎಂಬಂತೆ ಮಾಯಾವಾದಿಗಳನ್ನು ತಿರಸ್ಕರಿಸುವಲ್ಲಿ **एकः** ಮುಖ್ಯನಾದವನೊಬ್ಬನೇ, *अन्येभ्योऽपि दृश्यन्ते* ಎಂಬ ಸೂತ್ರದಿಂದ **ड प्रत्यय** ಬಂದಾಗ **जः** ಎಂದು ರೂಪವಾಗುತ್ತದೆ. [6]ಸೃಷ್ಟಿಯಕಾಲದಲ್ಲಿ ಪರನು ಒಬ್ಬನೇ ಹುಟ್ಟುವವನು, *हिरण्यगर्भः समवर्तताग्रे भूतस्य जातः पतिरेक आसीत्* ಎಂದು ಶ್ರುತಿಯು.

ಇಂತಹ ಮುಖ್ಯಪ್ರಾಣನೇ, **त्वं** ನೀನು, **वशी** [1]*वशोऽधीनः सर्वोऽस्यास्तीति* ಎಂಬ ವಿಗ್ರಹದಿಂದ ಸರ್ವವಸ್ತುಗಳೂ ಇವನ

